RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಏಪ್ರಿಲ್ ೪, ೨೦೧೩ (ಚೈತ್ರ ೧೪, ಶಕ ವರ್ಷ ೧೯೩೪)<br>Bangalore, Thursday, April 4, 2013 ( Chaithra 14, Shaka Varsha 1934) | ಸಂಚಿಕೆ ೧೪<br>Issue 14 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2012–13ರ ಹಣಕಾಸು ವರ್ಷದಲ್ಲಿ ನಾಲ್ಕನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನದ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/01/3/84 ದಿನಾಂಕ: 10–01–2013.

2. ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2012 ದಿನಾಂಕ: 02–06–2012, 09–08–2012 ಮತ್ತು 29–11–2012.

**ಪ್ರಸ್ತಾವನೆ:**

1. 2012–13ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ.425.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಅದರಂತೆ ದಿನಾಂಕ: 02–06–2012, 09–08–2012 ಮತ್ತು ದಿನಾಂಕ: 29–11–2012ರ ಆದೇಶದಲ್ಲಿ ಮೊದಲ ಮೂರು ಕಂತುಗಳ ಮೊತ್ತವಾದ ರೂ.318.75 ಲಕ್ಷಗಳನ್ನು ಕವಿನಿ ಆಯೋಗಕ್ಕೆ ಬಿಡುಗಡೆ ಮಾಡಲಾಗಿದೆ.

2.ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2012–13ನೇ ಸಾಲಿಗೆ ನಾಲ್ಕನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ.106.25 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2012 ಬೆಂಗಳೂರು, ದಿನಾಂಕ: 31–01–2013**

ಸರ್ಕಾರವು 2012–13ನೇ ಹಣಕಾಸು ವರ್ಷದ ನಾಲ್ಕನೇ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸನ್ಮಾನ್ಯ ವೆಚ್ಚ ಸಲುವಾಗಿ ರೂ.106.25/–ಲಕ್ಷ (ಒಂದು ನೂರ ಆರು ಲಕ್ಷ ಮತ್ತು ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2011 ದಿನಾಂಕ: 13.10.2011ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR.246**

### ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್ಆರ್ 2002 ದಿನಾಂಕ 31.05.2002.

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್ಆರ್ 2002 ದಿನಾಂಕ 19.12.2002.

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 539 ವೆಚ್ಚ–1/2012 ದಿನಾಂಕ 25.04.2012.
4. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಪ್‌ಪಿ 2012 ದಿನಾಂಕ:27.04.12.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 771 ವೆಚ್ಚ–1/2012 ದಿನಾಂಕ 29.06.2012.
6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಟಿಎಪ್‌ಪಿ 2012 ದಿನಾಂಕ: 04.10.2012.
7. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1199 Exp–1/12 ದಿನಾಂಕ 12.10.2012.
8. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 106 Exp–1/13 ದಿನಾಂಕ 01.02.2013.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4. ಕ್ರಮಾಂಕ 4ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.

5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.75.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 05.02.2013**

1. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿಗೆ ರೂ. 75.00 ಕೋಟಿ (ಎಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ಭರಿಸತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 106 Exp-1/13 ದಿನಾಂಕ: 01–02–2013 ರಲ್ಲಿ ಸಹಮತಿಯನ್ವಯ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.238**

**ಇಂಧನ ಸಚಿವಾಲಯ**

**ವಿಷಯ:** 2012–13ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ–1/2012 ದಿನಾಂಕ 02.04.2012 ಮತ್ತು 03.04.2012.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 08 ವೆಚ್ಚ–1/2013 ದಿನಾಂಕ 22.01.2013.

**ಪ್ರಸ್ತಾವನೆ:**

1) 2012–13ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–211 **Investment in Power Utility** ಯಡಿ ರೂ.500 ಕೋಟಿಗಳನ್ನು ನಿಗಧಿಪಡಿಸಲಾಗಿದೆ. ಈಗಾಗಲೇ ರೂ.290.00 ಕೋಟಿಗಳನ್ನು ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (**Equity**) ಹಣ ಬಿಡುಗಡೆ ಮಾಡಲಾಗಿದೆ.

2) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.30.00 ಕೋಟಿ (ರೂ. ಮೂವತ್ತು ಕೋಟಿಗಳು ಮಾತ್ರ) ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ.80.00 ಕೋಟಿಗಳ (ರೂ. ಎಂಬತ್ತು ಕೋಟಿಗಳು ಮಾತ್ರ) ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (**Equity**) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ 24–01–2013**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಕ್ರಮವಾಗಿ ರೂ.30.00 (ರೂ. ಮೂವತ್ತು ಕೋಟಿಗಳು ಮಾತ್ರ) ಹಾಗೂ ರೂ.80.00 ಕೋಟಿಗಳನ್ನು (ರೂ. ಎಂಬತ್ತು ಕೋಟಿಗಳು ಮಾತ್ರ) ವಿದ್ಯುತ್ ಬಂಡವಾಳ ಹೂಡಿಕೆಗಾಗಿ ಹಣ ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ "4801-01-190–0–09–211 Investment in Power Utilities (ಯೋಜನೆ)" ಯಡಿ ಭರಿಸತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts)ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ಯಾಗಿ ಬಳಸಿಕೊಂಡು, ಈ ಬಗ್ಗೆ ದೃಡೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
5. ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲಕರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ/ವಿನಾಯಿತಿ ನೀಡಿದೆ.
6. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 08 Exp–I/2013 ದಿನಾಂಕ 22.01.2013 ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.240**

## ಇಂಧನ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ನಿರಂತರ ಜ್ಯೋತಿ ಕಾಮಗಾರಿಗಳ ಸಲುವಾಗಿ ವಿಸಕಂಗಳಿಗೆ Equity ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ FD 24 Exp–1/2013 ದಿನಾಂಕ 17.01.2013.

**ಪ್ರಸ್ತಾವನೆ:**

1) 2012–13ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ 107ರಲ್ಲಿ ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂನಲ್ಲಿ ಬಂಡವಾಳ ಹೂಡಿಕೆಗೆ ರೂ.80.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ "4801–80–190–0–02–211 Investment in ESCOMs for Niranthara Jyothi works- Investment (ಯೋಜನೆ)" ಯಡಿ ನಿಗಧಿಪಡಿಸಲಾಗಿದೆ.

2) ವಿದ್ಯುತ್ ಸರಬರಾಜು ಕಂಪನಿಗಳಿಗೆ ರೂ.80.00 ಕೋಟಿಗಳಲ್ಲಿ ರೂ.60.00 ಕೋಟಿಗಳನ್ನು (ಅರವತ್ತು ಕೋಟಿ ರೂಪಾಯಿಗಳು ಮಾತ್ರ) ಸರ್ಕಾರವು ಪರಿಶೀಲಿಸಿ, ನಿರಂತರ ಜ್ಯೋತಿ ಯೋಜನಾ ಕಾಮಗಾರಿಗಳಿಗೆ Equity ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 22 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ 29–01–2013**

1. ವಿದ್ಯುತ್ ಸರಬರಾಜು ಕಂಪನಿಗಳು 2012–13ನೇ ಸಾಲಿನಲ್ಲಿ ಕೈಗೊಳ್ಳುವ ನಿರಂತರ ಜ್ಯೋತಿ (ಯೋಜನೆ) ಕಾಮಗಾರಿಗಳಿಗೆ "4801–80–190–0–02–211 Investment in ESCOMs for Niranthara Jyothi works (ಯೋಜನೆ)" ಲೆಕ್ಕ ಶೀರ್ಷಿಕೆಯಡಿ ರೂ.60.00 ಕೋಟಿಗಳನ್ನು (ಅರವತ್ತು ಕೋಟಿ ರೂಪಾಯಿಗಳು ಮಾತ್ರ) ವಿಸಕಂಗಳಿಗೆ ಬಿಡುಗಡೆ ಮಾಡಿದೆ.

2. ವಿದ್ಯುಚ್ಛಕ್ತಿ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು payee's receiptsನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಸದರಿ ಹಣವನ್ನು ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಗೆ ನಮೂದಿಸಿರುವ ಪ್ರಕಾರ ನಗದು ಸಂಪೂರ್ಣವಾಗಿ ಹಣ ಪಡೆದ 2 ದಿನದೊಳಗೆ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

| ಕ್ರಮ ಸಂಖ್ಯೆ | ಕಂಪನಿಗಳ ಹೆಸರು | Equity ರೂಪದಲ್ಲಿ ಬಿಡುಗಡೆ ಮಾಡಿದ ಹಣ (ಕೋಟಿ ರೂ.ಗಳಲ್ಲಿ) |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 20.00 |
| 2 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 15.00 |
| 3 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 10.00 |
| 4 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | 15.00 |
| | **ಮೊತ್ತ** | **60.00** |

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 24 Exp–1/2013 ದಿನಾಂಕ 17.01.2013 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.241**

## ಇಂಧನ ಸಚಿವಾಲಯ

**ವಿಷಯ:** 2012–13ನೇ ಸಾಲಿಗೆ ಪರಿಶಿಷ್ಟ ವರ್ಗಗಳ ಉಪಯೋಜನೆಯಡಿ (TSP)ವಿದ್ಯುತ್ ಸರಬರಾಜು ಕಂಪನಿಗಳು ಕೈಗೊಂಡಿರುವ ಕಾಮಗಾರಿಗಳಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಇಎನ್ 22 ಪಿಎಸ್ಆರ್ 2012 ದಿನಾಂಕ 27.04.2012.

2. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ: 27.04.2012.

3. ಸಮಾಜ ಕಲ್ಯಾಣ ಇಲಾಖೆಯ ಅ.ಟಿ ಸಂಖ್ಯೆ: ಸಕಇ 31 ಎಸ್‌ಎಲ್‌ಪಿ 2012 ದಿನಾಂಕ: 11.07.2012.

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 32 ಪಿಎಸ್ಆರ್ 2012 ದಿನಾಂಕ 17.07.2012, 18.10.2012 ಮತ್ತು 04.12.2012.

**ಪ್ರಸ್ತಾವನೆ:**

1. 2012–13ನೇ ಸಾಲಿನ ಆಯವ್ಯಯದ ಅಂದಾಜಿನಲ್ಲಿ ಪರಿಶಿಷ್ಟ ವರ್ಗಗಳ ಉಪ–ಯೋಜನೆಯಡಿ ಲೆಕ್ಕಶೀರ್ಷಿಕೆ 4801–80–190–0–02–423 ಗಿರಿಜನ ಉಪಯೋಜನೆಗೆ ರೂ 1500 ಲಕ್ಷಗಳನ್ನು ಒದಗಿಸಿದೆ. ಸಮಾಜ ಕಲ್ಯಾಣ ಇಲಾಖೆ ರೂ. 1000 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆ ನೀಡಿದೆ.
2. ಸಮಾಜ ಕಲ್ಯಾಣ ಇಲಾಖೆಯ ನಡವಳಿ ದಿನಾಂಕ: 11.07.2012ರ ಪ್ರಕಾರ ಇಂಧನ ಇಲಾಖೆ ಸಲ್ಲಿಸಿರುವ ವಿಸಕಂಗಳ ಕ್ರಿಯಾಯೋಜನೆಗಳನ್ನು ಅನುಮೋದಿಸಿರುತ್ತದೆ. ಈ ಮೊತ್ತವನ್ನು ಗಿರಿಜನರ ಜನತಾ ಕಾಲೋನಿಗಳು, ತಾಂಡಗಳು ಮತ್ತು ಕುಟೀರ ಜ್ಯೋತಿ ವಿದ್ಯುದ್ಧೀಕರಣ ಕಾರ್ಯಕ್ರಮಗಳಿಗೆ ಹಾಗೂ ಗಂಗಾ ಕಲ್ಯಾಣ ಯೋಜನೆಗೆ ಬಳಸಲು ಸೂಚಿಸಲಾಗಿದೆ.
3. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 17.07.2012, **18.10.2012 ಮತ್ತು 04.12.2012**ರಲ್ಲಿ ಕ್ರಮವಾಗಿ ರೂ. 333 ಲಕ್ಷಗಳು, ರೂ.250 ಲಕ್ಷಗಳು ಮತ್ತು ರೂ. 167 ಲಕ್ಷಗಳನ್ನು ಈಗಾಗಲೆ ಬಿಡುಗಡೆ ಮಾಡಿದೆ.
4. 2012–13ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ರೂ.250 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 32 ಪಿಎಸ್ಆರ್ 2012 ಬೆಂಗಳೂರು, ದಿನಾಂಕ 07.01.2013**

1. ಸರ್ಕಾರವು 2012–13ನೇ ಸಾಲಿಗೆ ರೂ.250/– (ಎರಡು ನೂರ ಐವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ಪರಿಶಿಷ್ಟ ವರ್ಗಗಳ ಉಪಯೋಜನೆಯಡಿ (TSP) ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ವಿದ್ಯುತ್ ಸರಬರಾಜು ಕಂಪನಿಗಳು | ಮೊಬಲಗು |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 25.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 25.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 75.00 |
| 4 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 75.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 50.00 |
| | **ಒಟ್ಟು ಮೊತ್ತ** | **250.00** |

2. ಸದರಿ ಮೊತ್ತವನ್ನು ಗಿರಿಜನರ, ಜನತಾ ಕಾಲೋನಿಗಳು, ತಾಂಡಗಳು ಮತ್ತು ಕುಟೀರ ಜ್ಯೋತಿ ವಿದ್ಯುದ್ಧೀಕರಣ ಕಾರ್ಯಕ್ರಮಗಳಿಗೆ ಮತ್ತು ಗಂಗಾ ಕಲ್ಯಾಣ ಯೋಜನೆಗಳಿಗೆ ಮಾತ್ರ ಬಳಸತಕ್ಕದ್ದು ಮತ್ತು Utilization Certificate ಗಳನ್ನು ಕಳುಹಿಸತಕ್ಕದ್ದು.

3. ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 4801–80–190–0–02–423(ಯೋಜನೆ)ಯಡಿ ಭರಿಸತಕ್ಕದ್ದು.

4. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯ ರವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

5. ಇಂಧನ ಇಲಾಖೆಯ ಕಡತ ಸಂಖ್ಯೆ. ಇಎನ್ 32 ಪಿಎಸ್ಆರ್ 2012ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿಯನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.242**

## ಇಂಧನ ಸಚಿವಾಲಯ

**ವಿಷಯ:** 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನದ ಬಾಕಿ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್ಆರ್ 2004 ದಿನಾಂಕ 15–03–2005.

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್ಆರ್ 2008 ದಿನಾಂಕ 04–09–2008

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್ಆರ್ 2012 ದಿನಾಂಕ 23.04.2012, 09–05–2012, 05.06.2012, 25.06.2012, 03.07.2012, 23.07.2012 06.08.2012, 31.08.2012, 6.09.2012, 4.10.2012, 8.10.2012, 2.11.2012, 15.11.2012, 14.12.2012 ಮತ್ತು 11.01.2013.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಮತ್ತು ಪೂರಕ ಅಂದಾಜು–2ರಲ್ಲಿ ರೂ 1250 ಕೋಟಿಗಳನ್ನು ಒದಗಿಸಲಾಗಿದೆ.

4. ವಿದ್ಯುತ್ ಸರಬರಾಜು ಕಂಪನಿಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

5. ಸರ್ಕಾರವು 2012–13ನೇ ಸಾಲಿನ ಜನವರಿ–2013ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನದ ಬಾಕಿ ಬಾಬ್ತಿಗೆ ರೂ. 150/– ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್ಆರ್ 2012 ಬೆಂಗಳೂರು, ದಿನಾಂಕ 23.01.2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡಿರುವುದಕ್ಕಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ನಿಗದಿ ಪಡಿಸಿರುವ ಬಾಕಿ ಸಹಾಯಧನದ ಬಾಬ್ತು ರೂ. 150/–ಕೋಟಿಗಳ (ರೂ. ನೂರ ಐವತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ. ಕೋಟಿಗಳಲ್ಲಿ)**

| ವಿಸಕಂ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ |
|---|---|
| ಬೆವಿಕಂ | 115 |
| ಹುವಿಕಂ | 35 |
| **ಒಟ್ಟು** | **150** |

2. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ವಿದ್ಯುತ್ ಸರಬರಾಜು ಕಂಪನಿಗಳು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪಾವತಿ ಮಾಡಬೇಕಾದ ವಿದ್ಯುತ್ ಖರೀದಿ ವೆಚ್ಚದ ಬಾಕಿ ಬಾಬ್ತಿಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಕೋರಿಕೆಯಂತೆ ಮೇಲಿನ ಕೋಷ್ಟಕದಲ್ಲಿರುವಂತೆ ನೇರವಾಗಿ ಬಿಡುಗಡೆ ಮಾಡಿದೆ.

4. ವಿದ್ಯುತ್ ಸರಬರಾಜು ಕಂಪನಿಗಳು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್.ಪಿವರೆಗಿನ ನೀರಾವರಿ ವಿದ್ಯುತ್ ಸ್ಥಾವರಗಳ ಬಾಬ್ತಿಗೆ ಲೆಕ್ಕೀಕರಿಸಲು ಆದೇಶಿಸಿದೆ.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 150–ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆ ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

4. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆ.ಇ 1239 ವೆಚ್ಚ–1/2012 ದಿನಾಂಕ 19.01.2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR.243**

## ಇಂಧನ ಸಚಿವಾಲಯ

**ವಿಷಯ:** ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ) ಬೆಸ್ಕಾಂ – ಇ.ಎ.ಪಿಯಡಿ ಬೆಸ್ಕಾಂಗೆ ಬಿಡುಗಡೆ ಮಾಡಬೇಕಾಗಿರುವ ಮೊಬಲಗಿನ ಬಗ್ಗೆ

**ಓದಲಾಗಿದೆ:** 1) ಬೆಸ್ಕಾಂ ಪತ್ರ ಸಂಖ್ಯೆ ಜಿಎಂ(ಎಫ್)/ಬಿಸಿ–46/1322(ಎಫ್)/ 1710 ದಿನಾಂಕ 30.07.2012.

2) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 1124 ವೆಚ್ಚ–1/12 ದಿನಾಂಕ 29.12.2012.

**ಪ್ರಸ್ತಾವನೆ:**

1. 2012–13ನೇ ಸಾಲಿನ ಆಯವ್ಯಯದಲ್ಲಿ ಸರ್ಕಾರವು ಲೆಕ್ಕ ಶೀರ್ಷಿಕೆ 6801–00–205–1–80–394 ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ) ಬೆಸ್ಕಾಂ – ಇಎಪಿ – ಸಾಲಗಳ ಅಡಿಯಲ್ಲಿ ರೂ 164.70 ಕೋಟಿಗಳನ್ನು ಒದಗಿಸಿದೆ.

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ವೆಚ್ಚವನ್ನು–ಮರಳಿಸುವ ಸಲುವಾಗಿ JICA ಸಂಸ್ಥೆಯು ಕೇಂದ್ರ ಸರ್ಕಾರಕ್ಕೆ ಪಾವತಿಸಿರುವ ಮೊತ್ತವನ್ನು, ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಹಂಚಿರುವುದಾಗಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿದೆ. ಈ ಮೊತ್ತವಾದ ರೂ. 79.92 ಲಕ್ಷಗಳನ್ನು ಸರ್ಕಾರದಿಂದ ಬಿಡುಗಡೆ ಮಾಡುವಂತೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಕೋರಿದೆ.

3. ಮೇಲಿನ ಕ್ರಮಾಂಕ–2ರಲ್ಲಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ ಎಫ್‌ಡಿ 1124 ವೆಚ್ಚ–1/12 ದಿನಾಂಕ 29.12.2012.ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್ ಡಿ 04 ಟಿಎಫ್ 2012 ದಿನಾಂಕ 27.04.2012ರಲ್ಲಿನ ಕಂಡಿಕೆ (16)ರಲ್ಲಿ ಆಡಳಿತ ಇಲಾಖೆಗೆ ನೀಡಿರುವ ಪ್ರದತ್ತವಾದ ಅಧಿಕಾರದ ಮೇರೆಗೆ ರೂ.79.92 ಲಕ್ಷಗಳನ್ನು ಬೆಸ್ಕಾಂಗೆ ಬಿಡುಗಡೆ ಮಾಡಲು ಸಹಮತಿಯನ್ನು ಸೂಚಿಸಿರುತ್ತದೆ. ಅದರಂತೆ, ಬೆಸ್ಕಾಂಗೆ ರೂ.79.92 ಲಕ್ಷಗಳನ್ನು ಬಿಡುಗಡೆ ಮಾಡುವ ಸಲುವಾಗಿ ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 69 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 01.02.2013**

1. ಬೆಂಗಳೂರು ಹಂಚಿಕೆ ಉನ್ನತೀಕರಣ (JBIC) ಯೋಜನೆಗೆ ಬೆಸ್ಕಾಂ (EAP) ಸಾಲಗಳ ಅಡಿಯಲ್ಲಿ ಭರಿಸಿದ ರೂ. 79.92 ಲಕ್ಷಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಪಾವತಿಯ ಮೊತ್ತವೆಂದು ಬಿಡುಗಡೆ ಮಾಡಲಾಗಿದೆ. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ 6801–00–205–1–80–394 ರಡಿ ಸಾಲಗಳು ಎಂದು ಭರಿಸತಕ್ಕದ್ದು.

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಹಣ ಸ್ವೀಕೃತ ರಶೀದಿಯ ಮೇಲು ಉಪಕಾರ್ಯದರ್ಶಿಯವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು.

3. ಹಣ ಸ್ವೀಕರಿಸಿದ 3 ದಿನದೊಳಗೆ ಅನುಸರಣ ವರದಿ ಮತ್ತು Utilization Certificate ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ) ಬೆಸ್ಕಾಂ ಇಎಪಿ ಸಾಲಗಳಾಗಿ ನೀಡಿರುವ ಮೊಬಲಗನ್ನು ಲೆಕ್ಕೀಕರಿಸುವ ಬಗ್ಗೆ ಮಹಾ ಲೇಖಪಾಲಕರಿಂದ ಪರಿಶೀಲಿಸಿ/ ಲೆಕ್ಕಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 1124 ವೆಚ್ಚ–1/12 ದಿನಾಂಕ 29.12.2012ರ ಸಹಮತಿಯನ್ವಯ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.247**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಟಿ.ಎಂ. ವೆಂಕಟರಮಣಪ್ಪ, ಹೆಚ್.ಸಿ.–3790, ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 39/ಡಿಇ1/ಆರ್6/2008 ದಿನಾಂಕ: 17–7–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)67/2011–12 (ಓ.ಬಿ. ಸಂಖ್ಯೆ:7/2012–13) ದಿನಾಂಕ: 28–4–2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18–8–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)26/2012–13 ದಿನಾಂಕ: 12–10–2012

**ಪ್ರಸ್ತಾವನೆ:**

ಶ್ರೀ ಟಿ.ಎಂ. ವೆಂಕಟರಮಣಪ್ಪ, ಹೆಚ್.ಸಿ.–3790, ಇವರು ಈ ಹಿಂದೆ ಸಿದ್ದಾಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ..

**ದೋಷಾರೋಪಣೆ:–**

"ಶ್ರೀ ಟಿ.ಎಂ. ವೆಂಕಟರಮಣಪ್ಪ, ಹೆಚ್.ಸಿ.–3790, ಪರಪ್ಪನ ಅಗ್ರಹಾರ ಪೊಲೀಸ್ ಠಾಣೆ (ಸಿದ್ದಾಪುರ ಪೊಲೀಸ್ ಠಾಣೆ) ಬೆಂಗಳೂರು ನಗರ ಆದ ನಿಮ್ಮನ್ನು ಪೊಲೀಸ್ ಕಮೀಷನರ್ ಕಛೇರಿಯ ಪತ್ರ ಸಂಖ್ಯೆ: ಎಸ್‌ಬಿ/ಪಾಸ್/ ಜೆಎನ್/5612/08 ಹಾಗೂ ಸಿದ್ದಾಪುರ ಪೊಲೀಸ್ ಠಾಣೆಯ ಸಂಖ್ಯೆ: ಎಫ್2/642/2008 ಹಾಗೂ ಪಾಸ್‌ಪೋರ್ಟ್ ಅರ್ಜಿ ಸಂಖ್ಯೆ: 371720 ಫೈಲ್ ನಂ. ಡಿಎನ್‌ಜಿಡಬ್ಲ್ಯೂ/7802265/08 ರಲ್ಲಿನ ಅರ್ಜಿದಾರರಾದ ಶ್ರೀ ಮುನೀರ್ ಅಬ್ದುಲ್ಲ ಎಂಬುವವರ ಪಾಸ್‌ಪೋರ್ಟ್ ಅರ್ಜಿಯ ವಿಚಾರಣೆ ಬಗ್ಗೆ ದಿನಾಂಕ: 30–6–2008 ರಂದು ನೇಮಕ ಮಾಡಿದ್ದು, ನೀವು ಪಾಸ್‌ಪೋರ್ಟ್ ಅರ್ಜಿದಾರರ ವಾಸದ ಮನೆಗೆ ಬೇಟಿ ನೀಡಿ, ಅರ್ಜಿದಾರರ ವಾಸದ ಬಗ್ಗೆ ನೆರೆಹೊರೆಯವರಿಂದ ದೃಡಪಡಿಸಿಕೊಂಡು ಅರ್ಜಿದಾರರ ಹೇಳಿಕೆ ಹಾಗೂ ನೆರೆಹೊರೆಯವರ ಹೇಳಿಕೆ ಪಡೆದುಕೊಂಡು, ನಿಮ್ಮ ಮೇಲಾಧಿಕಾರಿಯವರಿಗೆ ಹೇಳಿಕೆಗಳನ್ನು ಸಲ್ಲಿಸಬೇಕಾಗಿದ್ದರೂ ಸಹ ನೀವು ಪಾಸ್‌ಪೋರ್ಟ್ ಅರ್ಜಿದಾರರ ವಿಳಾಸಕ್ಕೆ ಭೇಟಿ ನೀಡದೆ ಅರ್ಜಿದಾರರು ನೀಡಿದ್ದ ವಿಳಾಸವು ಸುಳ್ಳಾಗಿದ್ದರೂ ಸಹ, ಅರ್ಜಿದಾರರ ವಾಸದ ಬಗ್ಗೆ ದೃಡೀಕರಿಸಿ ಮೇಲಾಧಿಕಾರಿಗಳನ್ನು ತಪ್ಪುದಾರಿಗೆಳೆದು ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಲು ಶಿಫಾರಸ್ಸು ಪತ್ರ ಕಳುಹಿಸಲು ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ, ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17–7–2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಮಾಡಲಾಗಿದೆ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿ: 05–9–08 ರಿಂದ 20–4–09ರ ವರೆಗಿನ ಅವಧಿಯನ್ನು ಇವರು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ದಂಡನಾದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಹಾಗೂ ಅವರು ಸಲ್ಲಿಸಿದ 22 ವರ್ಷಗಳ ಸೇವೆಯನ್ನು ಪರಿಗಣಿಸಿ ದಿನಾಂಕ: 28–4–2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ಶಿಕ್ಷೆಯನ್ನು ಈ ಕೆಳಕಂಡಂತೆ ಮಾರ್ಪಡಿಸಿದೆ.

**ಮಾರ್ಪಡಿಸಿದ ಆದೇಶ:**

1) ಶ್ರೀ ಟಿ.ಎಂ. ವೆಂಕಟರಮಣಪ್ಪ, ಮಾಜಿ ಹೆಚ್.ಸಿ.–3790, ಮಾಜಿ ಪ್ರಧಾನ ಮಂತ್ರಿಗಳ ಕುಟುಂಬದ ಭದ್ರತೆ, ಬೆಂಗಳೂರು ನಗರ, ರವರನ್ನು ಈ ಮೂಲಕ ಕರ್ತವ್ಯಕ್ಕೆ ಪುನರ್ ನೇಮಕ ಮಾಡಿ ಪೊಲೀಸ್ ಕಮೀಷನರ್, ಬೆಂಗಳೂರು ನಗರ, ರವರ ಘಟಕಕ್ಕೆ ನಿಯುಕ್ತಿಗೊಳಿಸಲಾಗಿದೆ. ಪೊಲೀಸ್ ಕಮೀಷನರ್, ಬೆಂಗಳೂರು ನಗರ, ರವರು ಇವರಿಗೆ ಸೂಕ್ತ ಸ್ಥಳನಿಯುಕ್ತಿ ಮಾಡುವುದು.

2) ಶ್ರೀ ಟಿ.ಎಂ. ವೆಂಕಟರಮಣಪ್ಪ, ಮಾಜಿ ಹೆಚ್.ಸಿ.–3790, ಮಾಜಿ ಪ್ರಧಾನ ಮಂತ್ರಿಗಳ ಕುಟುಂಬದ ಭದ್ರತೆ, ಬೆಂಗಳೂರು ನಗರ, ರವರ ವೇತನ ಶ್ರೇಣಿ ರೂ. 6,250–12,000/– ಆಗಿದ್ದು ಪ್ರಸ್ತುತ ರೂ. 10,000/– ಗಳ ವೇತನವನ್ನು ಪಡೆಯುತ್ತಿದ್ದು, ಇವರ ವೇತನವನ್ನು ಹೆಚ್.ಸಿ. ಹುದ್ದೆಯ ವೇತನ ಶ್ರೇಣಿಯಲ್ಲಿನ ಕನಿಷ್ಠ ವೇತನಕ್ಕೆ ಅಂದರೆ ರೂ. 6,250/– ಗಳಿಗೆ ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ (with cummulative effect) ಇಳಿಸಲಾಗಿದೆ. ಈ ಶಿಕ್ಷಾವಧಿಯು ಪೂರ್ಣಗೊಂಡ ನಂತರ ಸದರಿಯವರು ಈ ಹಿಂದೆ ಪಡೆಯುತ್ತಿದ್ದ ಮೂಲ ವೇತನ ರೂ. 10,000/– ಗಳಿಗೆ ವೇತನವನ್ನು ಮರುನಿಗದಿಗೊಳಿಸುವುದು.

3) ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿ ದಿ: 05–9–2008 ರಿಂದ ದಿನಾಂಕ: 20–4–2009ರ ವರೆಗಿನ ಅವಧಿಯನ್ನು ಇವರು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

4) ವಜಾಗೊಂಡ ದಿನಾಂಕದಿಂದ ಕರ್ತವ್ಯಕ್ಕೆ ವರದಿಮಾಡಿಕೊಳ್ಳುವ ದಿನಾಂಕದವರೆಗೆ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು ಕೆ.ಸಿ.ಎಸ್. ನಿಯಮ 1957ರ ನಿಯಮ 8 (14–ಎ) ಪ್ರಕಾರ ಕರ್ತವ್ಯದಿಂದ ಹೊರಗುಳಿದ ಅವಧಿಯೆಂದು (Dies non) ಪರಿಗಣಿಸಿದೆ.

5) ಈ ಆದೇಶವು ಶಿಸ್ತು ಪ್ರಾಧಿಕಾರಿಗಳು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 84 ಪೊಸಿಅ 2012 ಬೆಂಗಳೂರು, ದಿನಾಂಕ: 13–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಎಂ. ವೆಂಕಟರಮಣಪ್ಪ, ಹೆಚ್.ಸಿ.–3790, ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.265**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವೈ. ಪುಟ್ಟಸ್ವಾಮಿ, ಪಿ.ಸಿ.–7046, ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 24/ಡಿಇ/ಆರ್7/ಡಿಸಿಪಿ/ಪ/10 ದಿನಾಂಕ: 24–7–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ: 70/ಅಪೀಲು–1/2010 ದಿನಾಂಕ: 28–7–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–02–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)77/2011–12 ದಿನಾಂಕ: 25–10–2012

**ಪ್ರಸ್ತಾವನೆ:**

ಶ್ರೀ ವೈ ಪುಟ್ಟಸ್ವಾಮಿ, ಪಿ.ಸಿ.–7046, ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ವೈ ಪುಟ್ಟಸ್ವಾಮಿ, ಪಿ.ಸಿ.–7046, ಆದ ನೀವು ವಿಜಯನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮಗೆ ದಿ: 03–6–2010 ರಂದು ರಾತ್ರಿ 8.30 ಗಂಟೆಯಿಂದ ದಿ: 04–6–2010ರ ಬೆಳಿಗ್ಗೆ 8.30 ಗಂಟೆಯವರೆಗೆ ಠಾಣೆಯ ಸರಹದ್ದಿನ ಒಂದನೇ ಬೀಟ್‌ನಲ್ಲಿ ಪಿ.ಸಿ.–10789, ಎ. ಚೆಲುವರಾಜು ರವರ ಜೊತೆಯಲ್ಲಿ ಚೀತಾ 121 ರಲ್ಲಿ ಗಸ್ತು ಮಾಡಲು ನೇಮಿಸಿ, ಠಾಣಾ ಸರಹದ್ದಿನಲ್ಲಿ ಪದೇ ಪದೇ ವರದಿಯಾಗುತ್ತಿರುವ ಅಪರಾಧ ಪ್ರಕರಣಗಳ ಬಗ್ಗೆ ಎಚ್ಚರಿಕೆ ನೀಡಿ ಅನುಮಾನಾಸ್ಪದವಾಗಿ ನಡೆದಾಡುವ ವ್ಯಕ್ತಿಗಳನ್ನು ಕೂಲಂಕಷವಾಗಿ ವಿಚಾರ ಮಾಡುವಂತೆ ಮತ್ತು ಅನುಮಾನಾಸ್ಪದವಾಗಿ ಕಂಡು ಬರುವ ದ್ವಿಚಕ್ರ ವಾಹನಗಳನ್ನು ನಿಲ್ಲಿಸಿ ವಿಚಾರ ಮಾಡುವಂತೆ ಸೂಕ್ತ ತಿಳುವಳಿಕೆ ನೀಡಿ ನೇಮಕ ಮಾಡಿದ್ದರೂ ಸಹ ದಿ: 03–6–2010 ರಂದು ರಾತ್ರಿ ಸಮಯದಲ್ಲಿ ವಿಜಯನಗರ, 2ನೇ ಕ್ರಾಸ್, ಜಯಪ್ರಕಾಶ್ ಫ್ಯಾಷನ್ ಟೈಲರ್ ಅಂಗಡಿಯ ಮುಂಭಾಗ ನಿಲ್ಲಿಸಿರುವ ರೂ. 2,40,000/– ಬೆಲೆ ಬಾಳುವ ಟಾಟಾ ಇಂಡಿಕಾ ಕಾರು ಸಂಖ್ಯೆ: ಕೆಎ–11–9473 ಕಳುವಾಗಿರುತ್ತದೆ. ಈ ಬಗ್ಗೆ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 298/10 ಕಲಂ 379 ಐಪಿಸಿ ರೀತ್ಯ ಕೇಸು ದಾಖಲಾಗಿರುತ್ತದೆ. ಇದು ನೀವು ಬೀಟ್‌ನಲ್ಲಿ ಗಸ್ತು ಕರ್ತವ್ಯವನ್ನು ಸಮರ್ಪಕವಾಗಿ ಮಾಡದಿರುವುದು ಕಂಡು ಬಂದಿರುತ್ತದೆ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 24–7–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–7–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 21 ಪೊಸಿಅ 2012 ಬೆಂಗಳೂರು, ದಿನಾಂಕ: 13–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ. ಪುಟ್ಟಸ್ವಾಮಿ, ಪಿ.ಸಿ.–7046, ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.267**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್.ಸಿ. 25, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/05/2011 (ಓ.ಬಿ. ಸಂಖ್ಯೆ: 246/2011) ದಿನಾಂಕ: 10–10–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ ಮೇಲ್ಮನವಿ/01/ಪವ–2011 ದಿನಾಂಕ: 09–10–2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22–10–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)50/2012–13 ದಿನಾಂಕ: 21–12–2012

**ಪ್ರಸ್ತಾವನೆ:**

ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್‌ಸಿ 25, ಇವರು ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ, ಬೇಜವಾಬ್ದಾರಿತನ ಘೋರ ನಿರ್ಲಕ್ಷತನ, ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"1. ದಿನಾಂಕ: 20–06–2010ರಂದು ಬಸವನಹಳ್ಳಿ ಪೊಲೀಸ್ ಠಾಣೆಯ ರಾತ್ರಿ ಎಸ್.ಎಚ್.ಓ. ಕರ್ತವ್ಯದಲ್ಲಿದ್ದ ನೀವು ಆ ದಿನ ರಾತ್ರಿ 23:30 ಗಂಟೆಗೆ ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ತಮ್ಮ ಮೇಲೆ ಕೆಲವು ವ್ಯಕ್ತಿಗಳು ಹಲ್ಲೆ ನಡೆಸಿ ಕೊರಳಿದ್ದ ಚಿನ್ನದ ಸರ ಕದ್ದುಕೊಂಡು ಹೋಗಿರುವ ಬಗ್ಗೆ ನೀಡಿದ ದೂರಿನ ಬಗ್ಗೆ ಪ್ರಕರಣ ದಾಖಲಿಸದೇ ನಿಮ್ಮ ಆದ್ಯ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿರುತ್ತೀರಿ.

2. ತನ್ನ ಮೇಲೆ ಹಲ್ಲೆಯಾಗಿರುವ ಬಗ್ಗೆ ಹಾಗೂ ಚಿನ್ನದ ಸರ ಕದ್ದುಕೊಂಡು ಹೋಗಿರುವ ಬಗ್ಗೆ ದೂರು ನೀಡಲು ಬಂದಿದ್ದ ಶ್ರೀ ರಾಮಕೃಷ್ಣ ನಂಬಿಯಾರ್ ಹಾಗೂ ಅವರ ಜೊತೆಯಲ್ಲಿದ್ದ ಮೂವರು ಸಂಗಡಿಗರನ್ನು ವಿನಾಕಾರಣ ಬೆಳಗಿನ ಜಾವ ಐದು ಗಂಟೆಯವರೆಗೂ ಪೊಲೀಸ್ ಠಾಣೆಯಲ್ಲಿ ಅಕ್ರಮ ಬಂದನದಲ್ಲಿಟ್ಟು ದುರ್ನಡತೆ ಪ್ರದರ್ಶಿಸಿರುತ್ತೀರಿ.

3. ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ತಮ್ಮ ಮೇಲೆ ಹಲ್ಲೆಯಾದ ಬಗ್ಗೆ ಹಾಗೂ ಈ ಸಮಯದಲ್ಲಿ ಕೊರಳಲಿದ್ದ ಚಿನ್ನದ ಸರವನ್ನು ಕದ್ದುಕೊಂಡು ಹೋಗಿರುವ ಬಗ್ಗೆ ಲಿಖಿತ ದೂರು ಸಲ್ಲಿಸಲು ಠಾಣೆಗೆ ಬಂದಿದ್ದು, ಸದರಿಯವರ ದೂರನ್ನು ಹರಿದು ಹಾಕಿ ಅವರನ್ನು ಹೆದರಿಸಿ ಚಿನ್ನದ ಸರ ಕಳ್ಳತನವಾಗಿರುವ ವಿಷಯವನ್ನು ದೂರಿನಲ್ಲಿ ಸೇರಿಸದೇ ಬೇರೆ ದೂರನ್ನು

ಬರೆಯಿಸಿಕೊಂಡು ಠಾಣಾ ಎಸ್.ಎಚ್.ಓ. ಹುದ್ದೆಯ ದುರುಪಯೋಗ ಮಾಡಿಕೊಂಡು ನಿಮ್ಮ ಆದ್ಯ ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ತೋರಿಸಿರುತ್ತೀರಿ.

4. ಶ್ರೀ ರಾಮಕೃಷ್ಣನ್ ನಂಬಿಯಾರ್ ಹಾಗೂ ಸಂಗಡಿಗರನ್ನು ಪೊಲೀಸ್ ಠಾಣೆಯಿಂದ ಬಿಡಲು ರೂ.8000/–ಗಳ ಲಂಚವನ್ನು ಪಡೆದು ನಿಮ್ಮ ಆಧ್ಯ ಕರ್ತವ್ಯದಲ್ಲಿ ದುರ್ನಡತೆ ತೋರಿಸಿರುತ್ತೀರಿ.

5. ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ಸಲ್ಲಿಸಿದ ದೂರಿನ ಮೇಲೆ ಘೋರ ಪ್ರಕರಣ ದಾಖಲಿಸಬೇಕಾಗಿದ್ದ ನೀವು ಯಾವುದೊ ಆಮಿಷಕ್ಕೆ ಒಳಗಾಗಿ ಕೇವಲ ಎನ್.ಸಿ. ದಾಖಲಿಸಿರುತ್ತೀರಿ ಇದರಿಂದ ಮೂರನೇ ದಿನ ಅಂದರೆ ದಿ: 21–06–10 ರಂದು ಬಸವನಹಳ್ಳಿ ಪೊಲೀಸ್ ಠಾಣೆಯಲ್ಲಿ ಮೊ.ನಂ. 100/2010 ಕಲಂ 394 ಐ.ಪಿ.ಸಿ. ರೀತ್ಯಾ ಪ್ರಕರಣ ದಾಖಲಾಗಿದ್ದು ರಾತ್ರಿ ಎಸ್.ಎಚ್.ಓ. ಕರ್ತವ್ಯದಲ್ಲಿ ನೀವು ತೋರಿಸಿರುವ ಘೋರ ನಿರ್ಲಕ್ಷತನವನ್ನು ತೋರಿಸುತ್ತದೆ.

6. ಶ್ರೀ ಖಲೀಲ್ ಅಹಮದ್‌ರವರು ಎಂ.ಜಿ. ಆಸ್ಪತ್ರೆಯಲ್ಲಿ ನೀಡಿದ ದೂರಿನ ಮೇಲೆ ಎಸ್.ಸಿ. 96/2010 ನೀಡಿರುವ ಬಗ್ಗೆ ಠಾಣಾ ದಿನಚರಿಯಲ್ಲಿ ನಮೂದು ಮಾಡಿರುತ್ತೀರಿ ಆದರೆ ಎನ್.ಸಿ. ನಂ 96/2010ರ ಅಸಲು ನಮೂನೆ 76–ಎ ಕ್ರ.ಸಂ. 798ರಲ್ಲಿ ಯಾವುದೇ ವಿಷಯವನ್ನು ನಮೂದು ಮಾಡಿರುವುದಿಲ್ಲ. ಅಲ್ಲದೇ ಖಲೀಲ್ ಅಹಮದ್ ರವರು ನೀಡಿರುವ ದೂರನ್ನು ಸಿ.ಮಿಸ್ 189/2010 ರಲ್ಲಿ ಮೂಲ ಪ್ರತಿಯಲ್ಲಿ ಬರೆದಿರುವ ಬಗ್ಗೆ ಕಂಡು ಬಂದಿದ್ದು, ದ್ವಿಪ್ರತಿಯಲ್ಲಿ ಸಿ.ಮಿಸ್. 96/2010 ಎಂದು ತಿದ್ದುಪಡಿ ಮಾಡಿರುತ್ತೀರಿ. ಈ ರೀತಿ ಜವಾಬ್ದಾರಿಯುತ ರಾತ್ರಿ ಎಸ್.ಎಚ್.ಓ ಕರ್ತವ್ಯದಲ್ಲಿದ್ದ ನೀವು ಠಾಣಾ ದಾಖಲಾತಿಗಳನ್ನು ನಿಮ್ಮ ಕೆಟ್ಟ ಉದ್ದೇಶಗಳಿಗಾಗಿ ಉಪಯೋಗಿಸಿಕೊಂಡು ನಿಮ್ಮ ಆಧ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿ–ತನಗಳನ್ನು ತೋರಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 10–10–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಇವರು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಕಾಲ ಮೂಂದೂಡಿ, ದಿನಾಂಕ: 23–06–2010 ರಿಂದ 17–10–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–10–2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2 ವರ್ಷಗಳ ಕಾಲ ಮುಂದೂಡಲಾಗಿದೆ. ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 122 ಪೊಸಿಅ 2012 ಬೆಂಗಳೂರು, ದಿನಾಂಕ: 15–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್.ಸಿ. 25, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.251

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ. ರಾಘವೇಂದ್ರ, ಪಿ.ಎಸ್.ಐ., ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ(2)ಸಿಓಪಿ/10/ಆರ್–7/2011 ದಿನಾಂಕ: 06–4–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/12/2011–12 (ಓ.ಬಿ. ಸಂಖ್ಯೆ:17/ 2011–12) ದಿನಾಂಕ: 19–9–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14–12–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)62/11–12 ದಿನಾಂಕ: 07–3–2012

**ಪ್ರಸ್ತಾವನೆ:**

ಶ್ರೀ ಎಂ. ರಾಘವೇಂದ್ರ, ಪಿ.ಎಸ್.ಐ., ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ರಾಘವೇಂದ್ರ, ಪಿ.ಎಸ್.ಐ., ಆದ ನೀವು ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ: 13–12–10 ರಂದು ಅರ್ಜಿದಾರರ ತಮ್ಮನಾದ ಸೋಮಶೇಖರ್‌ಬಾಬು ಇವರು ಯಶವಂತಪುರದ ಎಂ.ಎಸ್.ಆರ್. ನಗರ 13ನೇ ಅಡ್ಡರಸ್ತೆ, ಮತ್ತಿಕೆರೆ ನಂ.20ರ ಬಳಿ ಕಟ್ಟಡದ ಕಾಮಗಾರಿ ಕೆಲಸ ಮಾಡಿಸುತ್ತಿರುವಾಗ್ಗೆ ಕಿಟಕಿಯ ಪ್ಲಾಸ್ಟಿಂಗ್ ಕೆಲಸದ ವಿಷಯದಲ್ಲಿ ಪಕ್ಕದ ಮನೆಯ ವಾಸಿಗಳಾದ ಶ್ರೀಮತಿ ಲಕ್ಷ್ಮೀದೇವಿ ಮತ್ತು ಅವರ ಕುಟುಂಬದವರು ತಕರಾರು ಮಾಡಿದ್ದು, ಇದೇ ವಿಷಯದಲ್ಲಿ ಒಬ್ಬರಿಗೊಬ್ಬರು ಜಗಳ ಮಾಡಿಕೊಂಡಿದ್ದು, ದೂರನ್ನು ನೀಡುವ ಸಲುವಾಗಿ ಯಶವಂತಪುರ ಠಾಣೆಗೆ ಬಂದಾಗ ವಿಶ್ವನಾಥ್ ಬಾಬು ರವರಿಗೆ ಈ ಹಿಂದಿನಿಂದಲೂ ಮೂರ್ಛೆ ರೋಗವಿದ್ದು, ಠಾಣೆಯಲ್ಲಿ ಮೂರ್ಛೆ ಬಂದಿದ್ದರಿಂದ ಅವರನ್ನು ಆಸ್ಪತ್ರೆಗೆ ಕಳುಹಿಸುವ ವ್ಯವಸ್ಥೆ ಮಾಡಿ, ನಂತರ ಶ್ರೀಮತಿ ಲಕ್ಷ್ಮೀದೇವಿ ರವರು ವೆಂಕಟೇಶ್, ಶ್ರೀನಿವಾಸ್ ಮತ್ತು ಬಾಬು ಎಂಬುವರ ವಿರುದ್ಧ ನೀಡಿದ ದೂರಿನಂತೆ ಮೊ.ಸಂ. 442/2010 ಕಲಂ 323, 341, 504, 506 (ಬಿ) ಐ.ಪಿ.ಸಿ. ರೀತ್ಯಾ ಕೇಸು ದಾಖಲು ಮಾಡಿಕೊಂಡು, ಅದೇ ಸಮಯಕ್ಕೆ ಲಕ್ಷ್ಮೀದೇವಿ ಮತ್ತು ಅವರ ಕುಟುಂಬದವರ ವಿರುದ್ಧ ದೂರು ನೀಡಲು ಠಾಣೆಯ ಬಳಿ ಬಂದಿದ್ದ ಅರ್ಜಿದಾರರು ಮತ್ತು ಅವರ ಸೋದರ ಸೋಮಶೇಖರ ರವರನ್ನು ಠಾಣೆಗೆ ಕರೆಸಿ ಎರಡೂ ಪಾರ್ಟಿಗಳನ್ನು ವಿಚಾರಣೆ ಮಾಡಿ ಕ್ರಮಕೈಗೊಳ್ಳದೆ ನೀವು ಏಕಪಕ್ಷೀಯವಾಗಿ ವರ್ತಿಸಿ ದೂರು ನೀಡಲು ಬಂದು ಠಾಣೆಯ ಹೊರಗೆ ನಿಂತಿದ್ದ ಅರ್ಜಿದಾರರೊಂದಿಗೆ ಅನುಚಿತವಾಗಿ ವರ್ತಿಸಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 06–4–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–9–2011ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 140 ಪೊಸಿಅ 2011 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ರಾಘವೇಂದ್ರ, ಪಿ.ಎಸ್.ಐ., ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.226**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಕೆ. ಪ್ರಕಾಶ್, ಪಿ.ಎಸ್.ಐ., ಹೆಚ್ ಅಂಡ್ ಬಿ, ಸಿ.ಐ.ಡಿ. ಕಾರ್ಲಟೌನ್ ಹೌಸ್, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಇವಿ/44/2010–11 (ಓ.ಬಿ. ಸಂಖ್ಯೆ: 31/2011–12) ದಿನಾಂಕ: 29–8–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/57/2011–12 (ಓ.ಬಿ. ಸಂಖ್ಯೆ: 60/2011–12) ದಿನಾಂಕ: 28–02–2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04–7–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)18/2012–13 ದಿನಾಂಕ: 23–8–2012

**ಪ್ರಸ್ತಾವನೆ:**

ಶ್ರೀ ಜಿ.ಕೆ. ಪ್ರಕಾಶ್, ಇವರು ಹಾಸನ ಜಿಲ್ಲೆಯ ಕೊಣನೂರು ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇನ್ನಿಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> 1] ಶ್ರೀ ಜಿ.ಕೆ. ಪ್ರಕಾಶ್, ಪಿ.ಎಸ್.ಐ., 2] ಶ್ರೀ ಧರ್ಮ, ಸಿ.ಪಿ.ಸಿ. 09 ಮತ್ತು ಶ್ರೀ ಭಾನುಪ್ರಕಾಶ್, ಸಿ.ಪಿ.ಸಿ. 693, ಕೊಣನೂರು ಪೊಲೀಸ್ ಠಾಣೆ, ಹಾಸನ ಜಿಲ್ಲೆ ಆದ ನೀವು ಕೊಣನೂರು ಪೊಲೀಸ್ ಠಾಣಾ ಮೊ.ನಂ. 190/2010 ಕಲಂ 457–380 ಐಪಿಸಿ ಪ್ರಕರಣದ ತನಿಖೆಗೆ ಸಂಬಂಧಿಸಿದಂತೆ ದಿನಾಂಕ: 04–8–2010 ರಂದು ಶ್ರೀ ರವೀಶ ಎಂಬುವವರನ್ನು ಠಾಣೆಗೆ ಕರೆಸಿದ್ದು, ರಾತ್ರಿ 8–30 ಗಂಟೆಯಲ್ಲಿ ಸದರಿಯವರನ್ನು ಪಿ.ಎಸ್.ಐ. ರವರ ಕೊಠಡಿಗೆ ಕರೆಯಿಸಿಕೊಂಡು ವಿಚಾರಣೆ ಕಾಲದಲ್ಲಿ ನೀವು ಮೂರು ಜನ ರವೀಶ್ ರವರಿಗೆ ಲಾಠಿಯಿಂದ ಹೊಡೆದು ಗಾಯಗೊಳಿಸಿ, ಸಾರ್ವಜನಿಕ ವ್ಯಕ್ತಿಗೆ ಹಲ್ಲೆ ಮಾಡಿ, ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.”

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29–8–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ಅವಧಿಗೆ ನಂತರದ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–02–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 69 ಪೊಸಿಅ 2012 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಕೆ. ಪ್ರಕಾಶ್, ಪಿ.ಎಸ್.ಐ., ಹೆಚ್ ಅಂಡ್ ಬಿ, ಸಿ.ಐ.ಡಿ. ಕಾರ್ಲಟೌನ್ ಹೌಸ್, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.227

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ವೈ. ಬಾಬಜಿ, ನಿವೃತ್ತ ಎ.ಪಿ.ಸಿ.–146, ಇವರು ಡಿ.ಎ.ಆರ್. ಗದಗ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ, ಇವರ ಆದೇಶ ಸಂಖ್ಯೆ: ಇವಿ/ಪಿಆರ್6/3/2006 (ಆ.ಪು. ಸಂಖ್ಯೆ: 403/2007) ದಿನಾಂಕ: 24–4–2007
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/164/ಉವ/2007 ದಿನಾಂಕ: 15–12–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17–01–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)64/2011–12 ದಿನಾಂಕ: 31–8–2012

**ಪ್ರಸ್ತಾವನೆ:**

ಶ್ರೀ ಹೆಚ್.ವೈ. ಬಾಬಜಿ, ಎ.ಪಿ.ಸಿ.–146, ಇವರು ಡಿ.ಎ.ಆರ್. ಗದಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

" ಆಪಾದಿತರಾದ ಎ.ಪಿ.ಸಿ.–146, ಹೆಚ್.ವೈ. ಬಾಬಜಿ. ಡಿ.ಎ.ಆರ್. ಗದಗ ಆದ ನೀವು ಡಿ.ಎ.ಆರ್. ಗದಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ, ನೀವು ದಿನಾಂಕ: 05–5–2006 ರಿಂದ ನಿಮ್ಮ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಉಳಿದಿರುತ್ತೀರಿ, ನೀವು ಗೈರುಹಾಜರ ಉಳಿದ ಅವಧಿಯಲ್ಲಿ ರಜೆ ಮಂಜೂರಾತಿ ಸಲುವಾಗಿ ರಜೆಯ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಹಾಗೂ ನೀವು ಗೈರುಹಾಜರ ಉಳಿದು 21 ದಿನ ಮೇಲ್ಪಟ್ಟಿರುವುದರಿಂದ ಕರ್ನಾಟಕ ರಾಜ್ಯಪೊಲೀಸ್ ಮ್ಯಾನುವಲ್ ಆದೇಶ ಸಂಖ್ಯೆ: 525ರ ಪ್ರಕಾರ ನಿಮಗೆ ಕರ್ತವ್ಯ ಪರಿತ್ಯಾಗ ಸೂಚನಾ ಪತ್ರವನ್ನು ದಿ: 22–6–2006 ರಂದು ಹೊರಡಿಸಲಾಗಿತ್ತು.

ಸದರಿ ಕರ್ತವ್ಯ ಪಲಾಯನ ಸೂಚನಾ ಪತ್ರವನ್ನು ನೀವು ದಿನಾಂಕ: 01–6–2006 ರಂದು ಸ್ವೀಕರಿಸಿದ್ದರೂ ಕೂಡ ನಿಗದಿತ ಅವಧಿಯಲ್ಲಿ ಮಾನ್ಯ ಎಸ್.ಪಿ. ಗದಗ ರವರ ಮುಂದೆ ಹಾಜರಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಈವರೆವಿಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರ ಉಳಿದು ಇಲಾಖೆಯ ಶಿಸ್ತಿನ ನಿಯಮಗಳ ವಿರುದ್ಧ ವರ್ತಿಸಿ ಕರ್ತವ್ಯದಲ್ಲಿ ಅತೀವ ಅಶಿಸ್ತು ಬೇಜವಾಬ್ದಾರಿತನ ಮತ್ತು ನಿಷ್ಕಾಳಜಿತನ ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 24–4–2007ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ಹಾಗೂ ಸದರಿಯವರು ಕರ್ತವ್ಯಕ್ಕೆ ಗೈರಹಾಜರಾದ ಅವಧಿ ದಿನಾಂಕ: 05–5–06 ರಿಂದ 26–10–2006 ಅನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–12–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 4 ಪೊಸಿಅ 2012 ಬೆಂಗಳೂರು, ದಿನಾಂಕ: 13–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ವೈ. ಬಾಬಜಿ, ನಿವೃತ್ತ ಎ.ಪಿ.ಸಿ.–146, ಇವರು ಡಿ.ಎ.ಆರ್. ಗದಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.289

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೃಷ್ಣಮೂರ್ತಿ, ಎ.ಎಸ್.ಐ., ಮಂಡ್ಯ ಸಂಚಾರಿ ಪೊಲೀಸ್ ಠಾಣೆ, ಮಂಡ್ಯ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಡಿಇ/18/2010–11 ಓ.ಬಿ. ಸಂಖ್ಯೆ: 156/11–12 ದಿನಾಂಕ: 30–8–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು(36)/2011–12 (ಓ.ಬಿ. ಸಂಖ್ಯೆ: 59/2011–12) ದಿನಾಂಕ: 15–3–2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–4–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)5/2012–13 ದಿನಾಂಕ: 31–7–2012

**ಪ್ರಸ್ತಾವನೆ:**

ಶ್ರೀ ಕೃಷ್ಣಮೂರ್ತಿ, ಎ.ಎಸ್.ಐ., ಇವರು ಕೆ.ಆರ್. ಪೇಟೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಎಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ಶ್ರೀ ಕೃಷ್ಣಮೂರ್ತಿ, ಎ.ಎಸ್.ಐ. ಆಗಿ ಕೆ.ಆರ್. ಪೇಟೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 25–6–2010 ರಂದು ಠಾಣೆಯಲ್ಲಿ ಕರ್ತವ್ಯದಲ್ಲಿದ್ದಾಗ ಅರ್ಜಿದಾರರಾದ ಶ್ರೀ ಅ.ನಿ. ದೇವರಾಜು ರವರು ತಮ್ಮ ಮೇಲೆ ದಿನಾಂಕ: 25–6–10 ರಂದು ತಮ್ಮ ಗ್ರಾಮದವರೆ ಆದ ಸ್ವಾಮಿಗೌಡ, ಪ್ರಭಾಕರ, ಮಂಜ ರವರುಗಳು ಬೈಕ್‌ನಲ್ಲಿ ಬಂದು ಡಿಕ್ಕಿ ಮಾಡಿ ಹಳೆಯ ದ್ವೇಷದಿಂದ ಹಲ್ಲೆ ಮಾಡಿ ಕೊಲೆ ಬೆದರಿಕೆ ಹಾಕಿದ ಬಗ್ಗೆ ಆ ಸಮಯದಲ್ಲಿ ಹೇಮಣ್ಣ ಮತ್ತು ದೇವರಾಜು ರವರು ಬಂದು ಬಿಡಿಸಿದ ಬಗ್ಗೆ ಅದೇ ದಿವಸ ಮಧ್ಯಾಹ್ನ 12–30 ಗಂಟೆಯ ಸಮಯದಲ್ಲಿ ಎ.ಎಸ್.ಐ. ಕೃಷ್ಣಮೂರ್ತಿ ರವರಿಗೆ ನೀಡಿದ ದೂರಿನ ಮೇರೆಗೆ ಕೆ.ಆರ್. ಪೇಟೆ ಗ್ರಾಮಾಂತರ ಠಾಣಾ ಮೊ.ಸಂ. 232/10 ಕಲಂ:279–341–323–506–ಕೂಡ 34 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತೆ ಹಾಗೂ ಅದೇ ದಿವಸ ಮಧ್ಯಾಹ್ನ 1–10 ಗಂಟೆಗೆ ಆರೋಪಿಗಳು ಸ್ವತಃ ಹಾಜರಾದ ಮೇರೆಗೆ ದಸ್ತಗಿರಿ ಕ್ರಮ ಜರುಗಿಸಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುತ್ತಾರೆ.

2) ಎದುರು ಅರ್ಜಿದಾರರಾದ ಹಾಗೂ ಪ್ರಕರಣ ಸಂಖ್ಯೆ: 232/10ರಲ್ಲಿ ಆರೋಪಿಯಾಗಿರುವ ಶ್ರೀ ಪ್ರಭಾಕರ್ ರವರು ದಿ: 25–6–10 ರಂದು ತಮ್ಮ ಗ್ರಾಮದವರೇ ಆದ ಶ್ರೀ ಅ.ನಿ. ದೇವರಾಜು ರವರು ಬೈಕ್‌ನಲ್ಲಿ ಬಂದು ಹಲ್ಲೆ ಮಾಡಿ ಕೊಲೆ ಬೆದರಿಕೆ ಹಾಕುವಾಗ ಹೇಮಣ್ಣ ಮತ್ತು ಮಂಜು ಎಂಬುವವರು ಬಂದು ಬಿಡಿಸಿದರು ಎಂಬ ಬಗ್ಗೆ ಮದ್ಯಾಹ್ನ 1–10 ಗಂಟೆಯ ಸಮಯದಲ್ಲಿ ಎ.ಎಸ್.ಐ. ಕೃಷ್ಣಮೂರ್ತಿ ರವರಿಗೆ ನೀಡಿದ ದೂರಿನ ಮೇರೆಗೆ ಕೆ.ಆರ್. ಪೇಟೆ ಗ್ರಾಮಾಂತರ ಠಾಣಾ ಮೊ.ಸಂ: 233/10 ಕಲಂ 279–504–323, 506 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ ಹಾಗೂ ಅದೇ ದಿವಸ ಮಧ್ಯಾಹ್ನ 1–30 ಗಂಟೆಗೆ ಆರೋಪಿ ಅ.ನಿ. ದೇವರಾಜು ರವರನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂದನಕ್ಕೆ ಒಳಪಡಿಸಿರುತ್ತೆ. ಈ ಎರಡು ಪ್ರಕರಣಗಳಲ್ಲಿ ಶ್ರೀ ಕೃಷ್ಣಮೂರ್ತಿ, ಎ.ಎಸ್.ಐ. ರವರು ತನಿಖಾಧಿಕಾರಿಯಾಗಿ ಪ್ರಕರಣವನ್ನು ನೊಂದಾಯಿಸಿಕೊಂಡು ಪ್ರಾಥಮಿಕ ತನಿಖೆಯನ್ನು ನಡೆಸದೆ ಪ್ರತ್ಯಕ್ಷ ಸಾಕ್ಷಿದಾರರ ಹೇಳಿಕೆಯನ್ನು ಮಾಡದೆ ಪ್ರಕರಣಗಳ ಸತ್ಯಾಸತ್ಯತೆಯನ್ನು ವಿಚಾರಣೆ ಮಾಡದೆ ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂದನಕ್ಕೆ ಕಳುಹಿಸಿದ್ದಲ್ಲದೆ ಮೇಲಾಧಿಕಾರಿಗಳು ಠಾಣೆಯ ಪರಿವೀಕ್ಷಣೆಯ ಸಮಯದಲ್ಲಿ ಸದರಿ ಕಡತವನ್ನು ಪರಿಶೀಲಿಸಿದಾಗ ಎ.ಎಸ್.ಐ. ಕೃಷ್ಣಮೂರ್ತಿ ಇವರು ಹಿರಿಯ ಅಧಿಕಾರಿಗಳಿಗೆ ತನಿಖೆಯಲ್ಲಿ ತಪ್ಪು ಮಾಹಿತಿ ನೀಡಿ ಎರಡು ಪ್ರಕರಣಗಳಲ್ಲಿ ಪ್ರತ್ಯಕ್ಷ ಸಾಕ್ಷಿದಾರರಾದ ಶ್ರೀ ಹೇಮಣ್ಣ, ಶ್ರೀ ಮಂಜ, ಶ್ರೀ ಎ.ಬಿ. ದೇವರಾಜು ರವರುಗಳ ಹೇಳಿಕೆಗಳನ್ನು ಭೌತಿಕವಾಗಿ ಪಡೆಯದೆ ಪಿರ್ಯಾದಿಗೆ ಅನುಗುಣವಾಗಿ ತಾವೇ ಸೃಷ್ಟಿಸಿಕೊಂಡು ಯಾವುದೋ ಆಮಿಷಕ್ಕೆ ಒಳಗಾಗಿ ಪಿರ್ಯಾದಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿಯನ್ನು ನೀಡಿರುವುದಾಗಿದೆ.

3) ಎನ್.ಸಿ.ಆರ್. ಸಂಖ್ಯೆ: 93/10 ರಲ್ಲಿ ಶ್ರೀ ಬಾಲಸುಂದರಮೂರ್ತಿ, ಚಟ್ಟಂಗೆರೆ ಗ್ರಾಮ ರವರ ಅರ್ಜಿಯನ್ನು ದಿನಾಂಕ: 09–3–2010 ರಿಂದ ವಿಚಾರಣೆ ನಡೆಸದೆ 5 ತಿಂಗಳು 14 ದಿನಗಳವರೆಗೆ ಬಾಕಿ ಇಟ್ಟುಕೊಂಡಿದ್ದಲ್ಲದೆ ಸದರಿ ಅರ್ಜಿಯಲ್ಲಿ ಪ್ರಾಣ ಬೆದರಿಕೆ ಬಗ್ಗೆ ಪಿರ್ಯಾದು ನಮೂದಾಗಿದ್ದು ಸದರಿ ಅರ್ಜಿಯನ್ನು ಎನ್.ಸಿ.ಆರ್. ಮಾಡಿರುವುದು ಕಂಡು ಬಂದಿರುತ್ತದೆ. ಹೀಗೆ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತೆ ಎಂದು ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆ.ಪೊ.ಅ. ರವರ ವಿರುದ್ಧ ಆರೋಪವು ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30–8–2011ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯಲಾಗಿದೆ, ದಿನಾಂಕ: 05–9–2010 ರಿಂದ 01–12–2010ರ ವರೆಗೆ ಒಟ್ಟು 88 ದಿನಗಳ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–3–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 35 ಪೊಸಿಅ 2012 ಬೆಂಗಳೂರು, ದಿನಾಂಕ: 21–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೃಷ್ಣಮೂರ್ತಿ, ಎ.ಎಸ್.ಐ., ಮಂಡ್ಯ ಸಂಚಾರಿ ಪೊಲೀಸ್ ಠಾಣೆ, ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.332

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜೇಮ್ಸ್ ಮೆನೇಜೆಸ್, ಪಿ.ಐ., ಬಿಜಾಪುರ, ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)94/2008–09 ದಿನಾಂಕ: 22–02–2012
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 02–5–2012
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)94/2008–09 ದಿನಾಂಕ: 18–8–2012

**ಪ್ರಸ್ತಾವನೆ:**

ಶ್ರೀ ಜೇಮ್ಸ್ ಮೆನೇಜಸ್, ಇವರು ಗುಲ್ಬರ್ಗಾದ ಚೌಕ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

ಶ್ರೀ ಜೇಮ್ಸ್ ಮ್ಯಾನೇಜಸ್, ಪಿ.ಐ., ಚೌಕ ಪೊಲೀಸ್ ಠಾಣೆ, ಗುಲ್ಬರ್ಗಾ ನಿಮ್ಮ ಮೇಲೆ ಈ ಕೆಳಗಿನಂತೆ ಆಪಾದನೆ ಮಾಡಲಾಗಿದೆ.

**ಆರೋಪ 01:–** ದಿನಾಂಕ: 29–10–2008 ರಂದು ಸುಮಾರು ರಾತ್ರಿ 01–00 ಗಂಟೆ ಸಮಯದಲ್ಲಿ ನೀವು ನಿಮ್ಮ ಸಂಗಡ 4–5 ಜನರು ಸಿಬ್ಬಂದಿಯೊಂದಿಗೆ ಗಂಜ ಪ್ರದೇಶದಲ್ಲಿ ಗುಂಡೇರಾವ ಲಿಂಗದೆ ಅಡತ ಅಂಗಡಿಯಲ್ಲಿ ಇಸ್ಪೇಟ ಜೂಜಾಟದಲ್ಲಿ 88 ಜನರನ್ನು ದಸ್ತಗಿರಿ ಮಾಡುವಂತ ಸಂದರ್ಭದಲ್ಲಿ ಯಾವದೇ ಪೂರ್ವ ಯೋಜನೆ ಮಾಹಿತಿ ಸಂಗ್ರಹಿಸದೆ ಕಡಿಮೆ ಸಿಬ್ಬಂದಿ ಬಲದೊಂದಿಗೆ ಸ್ಥಳಕ್ಕೆ ಹೋಗಿ ಕಾನೂನು ಸುವ್ಯವಸ್ಥೆ ಪರಿಸ್ಥಿತಿ ಉದ್ಭವಿಸಲು ಕಾರಣರಾಗಿ ಸೂಕ್ತ ಪೊಲೀಸ್ ಬಲವನ್ನು ಪಡೆಯದೆ ಸಮರ್ಪಕ ಯೋಜನೆ ಮಾಡದೆ ಗೊಂದಲ ಪರಿಸ್ಥಿತಿ ನಿರ್ಮಿಸಿ ನಿರ್ಲಕ್ಷತನ ತೋರಿಸಿ ಎಲ್ಲ 88 ಜನರನ್ನು ಗುಂಡೇರಾವ ಲಿಂಗದೆ ಅಡತ ಅಂಗಡಿ ಸಂ 81477 ನೇದ್ದರಲ್ಲಿ ದಸ್ತಗಿರಿ ಮಾಡಿದ್ದು ನೀವು ಸದರ ಕಟ್ಟಡದೊಳಗೆ ಪ್ರವೇಶ ಮತ್ತು ಶೋಧನೆ ಸಲುವಾಗಿ ಮುಂಚಿತವಾಗಿ ನಿಮ್ಮ ಸಮೀಪದ ಮೇಲಾಧಿಕಾರಿಗಳಾದ ಡಿ ಎಸ್ ಪಿ (ಬಿ) ರವರಿಂದ ವಾರೆಂಟ ಪಡೆಯಬಹುದಿತ್ತು. ಇಲ್ಲವೆ ಡಿ.ಎಸ್.ಪಿ. ರವರು ನೇತೃತ್ವವಹಿಸಿಕೊಳ್ಳುವಂತೆ ಕೇಳಬಹುದಾಗಿತ್ತು ಅಲ್ಲದೆ ಕಲಂ 78–80 ಪೊಲೀಸ್ ಕಾಯ್ದೆ ಪ್ರಕರಣದ ತೀವ್ರತೆ ಕಡಿಮೆ ಮಾಡಿ ಕಲಂ 87 ಕೆ ಪಿ ಎಕ್ಟ್ ಕಾಯ್ದೆಯಲ್ಲಿ ದಾಖಲ ಮಾಡಿ ಉದ್ದೇಶ ಪೂರ್ವಕವಾಗಿ ನಿಯಮಗಳನ್ನು ಅನುಸರಿಸದೆ ಅಲಕ್ಷತನ ಪ್ರದರ್ಶಿಸಿದ್ದಿರಿ ಮತ್ತು ನೀವು ಈ ಪ್ರಕರಣಗಳಲ್ಲಿ ಹಲವಾರು ಜನರಿಗೆ ನೋಡುಗರಾಗಿದ್ದ ಮತ್ತು ಪೂಜೆ ಕಾಲದಲ್ಲಿ ಅಂಗಡಿಯಲ್ಲಿ ಸುಮ್ಮನೆ ಕುಳಿತಿದ್ದವರನ್ನು ಸೇರಿ ಒಟ್ಟು 88 ಜನರಿಂದ ಕೇವಲ 12,300 ರೂ.ಗಳನ್ನು ಜಪ್ತಿ ಮಾಡಿದಂತೆ ದಾಖಲೆಗಳಲ್ಲಿ ತೋರಿಸಿ ಸ್ಥಳದಿಂದ ಅಂದಾಜು 2 ರಿಂದ 3 ಲಕ್ಷ ರೂ ಗಳವರೆಗೆ ಅಲ್ಲಿದ್ದ ಬಂದಂತ ರೈತರು ಮತ್ತು ಇತರರಿಂದ ಹಣವನ್ನು ಕಿತ್ತುಕೊಂಡು ಇಲಾಖೆಗೆ ಚ್ಯುತಿ ತಂದಿರುವಿರಿ ಅಲ್ಲದೆ ದೀಪಾವಳಿ ಹಬ್ಬದ ಸಂದರ್ಭದಲ್ಲಿ ಅಷ್ಟೊಂದು ಜನರ ಮೇಲೆ ಕಡಿಮೆ ಸಿಬ್ಬಂದಿಯೊಂದಿಗೆ ಸ್ಥಳಕ್ಕೆ ಹೋಗಿ ಮುತ್ತಿಗೆ ಹಾಕಿ ಕಾನೂನು ಸುವ್ಯವಸ್ಥೆ ಉದ್ಭವಿಸುವಂತೆ ಮಾಡಿದ್ದಿರಿ ಮತ್ತು ಈ ವಿಷಯವನ್ನು ಮೇಲಾಧಿಕಾರಿಗಳಿಗೆ ತಿಳಿಸದೆ ಸಮರ್ಪಕ ಕ್ರಮ ಅನುಸರಿಸದೆ ದುರ್ನಡತೆ ಪ್ರದರ್ಶಿಸಿರುತ್ತೀರಿ.

**ಆರೋಪ ನಂ: 01ರ ಪ್ರಕರಣಕ್ಕೆ ಸಂಬಂಧಿಸಿದಂತೆ:**

**ಆರೋಪ 02**: ಅಮಾಯಕರಿಂದ ಈ ಪ್ರಕರಣದಲ್ಲಿ 2–3 ಲಕ್ಷ ರೂ. ವಶಪಡಿಸಿಕೊಂಡು ಆದರೆ ದಾಖಲಾತಿಗಳಲ್ಲಿ ಕೇವಲ 12,300 ರೂ. ಮಾತ್ರ ಜಪ್ತಿ ಮಾಡಿರುವುದಾಗಿ ತೋರಿಸಿ ಮೇಲಾಧಿಕಾರಿಗಳಿಗೆ ಸುಳ್ಳು ಮಾಹಿತಿ ನೀಡಿ ಸರಕಾರಕ್ಕೆ ವಂಚನೆ ಮಾಡಿ ನೀವು ದುರ್ನಡತೆ ಪ್ರದರ್ಶಿಸಿರುವುದು ಕಂಡು ಬರುತ್ತದೆ.

**ಆರೋಪ–03:** ಶ್ರೀ ಅರವಿಂದ ದೇಸಾಯಿ ಹಾಗೂ ಶ್ರೀ ಷಣ್ಮುಖಪ್ಪ ದೇಸಾಯಿ ಇವರುಗಳ ಮಧ್ಯ ಸಿವಿಲ್ ಸ್ವರೂಪದ ವಿಷಯದಲ್ಲಿ ಪೊಲೀಸರಿಗೆ ಯಾವುದೇ ಅಧಿಕಾರಿ ಇಲ್ಲದಿದ್ದರು ಕೂಡಾ ನೀವು ದಿನಾಂಕ: 03–11–2008 ರಂದು ಅನಾವಶ್ಯಕವಾಗಿ ಶ್ರೀ ಅರವಿಂದ ರವರಿಗೆ ಚೌಕ ಠಾಣೆಗೆ ಕರೆಯಿಸಿ ಅವಾಚ್ಯ ಶಬ್ದಗಳಿಂದ ಬೈದು ಹೆದರಿಸಿ ಮಾನಸಿಕ ಹಿಂಸೆ ಮಾಡಿ ಆಸ್ತಿಯೊಂದನ್ನು ತಮ್ಮ ತಾಬೆಯಿಂದ ಬಿಟ್ಟುಕೊಡಲು ಒತ್ತಾಯ ಪೂರ್ವಕವಾಗಿ ಮುಚ್ಚಳಿಕೆ ಪತ್ರವೊಂದನ್ನು ನೀವು ಬರೆಯಿಸಿಕೊಂಡು ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ್ದಿರಿ. ಅಲ್ಲದೆ ನಿಮ್ಮ ಹತ್ತಿರದ ಮೇಲಾಧಿಕಾರಿಯಾದ ಡಿ ಎಸ್ ಪಿ (ಬಿ) ರವರಿಗೆ ವಿಷಯ ತಿಳಿದು ಡಿ ಎಸ್ ಪಿ. (ಬಿ) ರವರು ನಿಮಗೆ ದೂರವಾಣಿ ಮುಖಾಂತರ ಮಾತನಾಡಿ ನೀವೂ ಕಾನೂನಿನ ಪ್ರಕಾರ ಕೇಸು ದಾಖಲು ಮಾಡಿರಿ ಆದರೆ ಸದರಿ ಅರವಿಂದರವರಿಗೆ ಹೊಡೆಬಡೆ ಮಾಡಬೇಡಿರಿ ಎಂದು ಸೂಚಿಸಿದಾಗ ಅದಕ್ಕೆ ನೀವು "ಯಾವಾಗ ಈ ವಿಷಯ ನಿಮಗೆ ತಿಳಿಸಿದ್ದಾರೆ ಎಂದ ಮೇಲೆ ಇವರಿಗೆ ಹೊಡೆದು ಬಿಡುತ್ತೇನೆ ಎಂದು ನೀವು ಏನು ಮಾಡುತ್ತೀರಿ ಮಾಡಿಕೊಳ್ಳಿ ಅಂತ ಉದ್ಧಟತನದಿಂದ ಏರು ಧ್ವನಿಯಲ್ಲಿ ಮಾತನಾಡಿ ನಿಮ್ಮ ಮೇಲಾಧಿಕಾರಿಗಳಿಗೆ ಅಗೌರವವನ್ನು ತೋರಿಸಿ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ್ದಿರಿ.

**ಆರೋಪ 4:–** ನೀವು ದಿನಾಂಕ: 12–13/11/2008 ರಂದು ರಾತ್ರಿ (ಬಿ) ಉಪ ವಿಭಾಗದ ವ್ಯಾಪ್ತಿಯಲ್ಲಿ ರಾತ್ರಿ ಗಸ್ತು ಮೇಲ್ವಿಚಾರಣೆ ಕರ್ತವ್ಯದಲ್ಲಿದ್ದಾಗ ಅಶೋಕ ನಗರ ಠಾಣೆ (ಅ ವಿ) ಪಿ.ಎಸ್.ಐ. ರವರಾದ ಶ್ರೀ ಬಸಣ್ಣ ರವರು ಅಶೋಕ ನಗರ ಠಾಣೆ ವ್ಯಾಪ್ತಿಯ ಗಸ್ತು ಮೇಲ್ವಿಚಾರಣೆಯಲ್ಲಿದ್ದಾಗ ಶ್ರೀ ನಾಸೀರ ಹುಸೇನ ರವರೊಂದಿಗೆ ಘರ್ಷಣೆಯಾಗಿದ್ದು ಈ ಕುರಿತು ಪಿ.ಎಸ್.ಐ. (ಅ.ವಿ) ರವರು ತಮ್ಮ ಮೇಲ್ವಿಚಾರಣೆ ಅಧಿಕಾರಿಯಾದ ಸ್ಟೇಷನ್ ಬಜಾರ ಪೊಲೀಸ್ ಠಾಣೆಯ ಪಿ.ಐ. ರವರಾದ ಶ್ರೀ ಯು.ಬಿ. ಚಿಕ್ಕಮಠ ರವರಿಗೆ

ನಿಸ್ತಂತು ಮೂಲಕ ಗಲಾಟೆಯಾಗಿರುವ ಬಗ್ಗೆ ಹೇಳಿ ಅವರಿಗೆ ಸ್ಥಳಕ್ಕೆ ಬರಲು ತಿಳಿಸಿದಾಗ ನೀವು ಆ ವಿಷಯದಲ್ಲಿ ನಿಸ್ತಂತುವಿನಲ್ಲಿ ಕೇಳಿ ಯಾವುದೋ ಒಂದು ದುರುದ್ದೇಶ ಇಟ್ಟುಕೊಂಡು ಶಾಂತಿ ನಗರ ಬಡಾವಣೆಯಲ್ಲಿರುವ ಶ್ರೀ ಸಾದತ್ ಹುಸೇನ ಎಂಬ ವಕೀಲರ ಮನೆಗೆ ಹೋಗಿ ಅಕ್ರಮವಾಗಿ ಪ್ರವೇಶಿಸಿ ಅಲ್ಲಿದ್ದ ಅವರ ಮಕ್ಕಳಾದ ಶ್ರೀ ಜಾಕೀರ, ನಾಶಿರ ಹಾಗೂ ತನ್ವಿರ ಹುಸೇನ ರವರೊಂದಿಗೆ ಅನುಚಿತವಾಗಿ ವರ್ತಿಸಿ ಅವರಿಗೆ ಹೊಡೆಬಡೆ ಮಾಡಿ ಅವರಿಗೆ ರಿವಾಲ್ವರ್ ಕಡೆ ಕೈ ಮಾಡಿ ತೋರಿಸಿ ಎನ್‌ಕೌಂಟರ ಮಾಡುವುದಾಗಿ ಬೆದರಿಕೆ ಹಾಕಿ 3 ಜನ ಸಹೋದರರಿಗೆ ಅಶೋಕ ನಗರ ಠಾಣೆಗೆ ಕರೆದುಕೊಂಡು ಬಂದು ಹಿಂಸೆ ನೀಡಿ ದುರ್ನಡತೆ ಪ್ರದರ್ಶಿಸಿದ್ದಿರಿ. ನೀವು ದಿನಾಂಕ: 12, 13/11/08 ರಂದು ರಾತ್ರಿ "ಬಿ" ಉಪ ವಿಭಾಗದ ಗಸ್ತಿನ ಮೇಲ್ವಿಚಾರಣೆ ಇದ್ದು ವಿನಾಃಕಾರಣ ಯಾರಿಗೂ ಹೇಳದೆ ಕೇಳದೆ ಅನವಶ್ಯಕವಾಗಿ ಅಶೋಕ ನಗರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಹೋಗಿ ಗಲಭೆಯನ್ನುಂಟು ಮಾಡಿ ಇಲಾಖೆಗೆ ಅಗೌರವ ಬರುವಂತೆ ನಡೆದುಕೊಂಡು ಅಶಿಸ್ತು ಪ್ರದರ್ಶಿಸಿದ್ದ ಆಪಾದನೆಗಳು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ 3 ಮತ್ತು 4 ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22–02–2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ತಡೆಹಿಡಿಯಲಾಗಿದೆ, ದಿನಾಂಕ:14–11–2008 ರಿಂದ 04–4–2009ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪೊಸಿಅ 2012 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೇಮ್ಸ್ ಮೆನೇಜೆಸ್, ಪಿ.ಐ., ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.287**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:–** ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ರಾಜ್ಯದ 3 ಜಿಲ್ಲೆಗಳ ಒಟ್ಟು 352 ಜೀತ ವಿಮುಕ್ತರಿಗೆ 2012–13ನೇ ಸಾಲಿನಲ್ಲಿ ಕೇಂದ್ರದ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:–**
1. ಜಿಲ್ಲಾ ಪಂಚಾಯಿತಿ ಬಳ್ಳಾರಿ ಇವರ ಪತ್ರ ಸಂ: ಜಿಪಂಬ ಅಭಿವೃದ್ಧಿ 5 ಆರ್‌ಬಿಎಲ್ 2012–13 ದಿನಾಂಕ: 14–07–2012 ಹಾಗೂ 07–08–2012
2. ಜಿಲ್ಲಾ ಪಂಚಾಯಿತಿ ರಾಮನಗರ ಇವರ ಪತ್ರ ಸಂ: ರಾಜಿಪಂ/ಡಿಆರ್‌ಡಿಎ/ಜಿವಿಕು/ 2011–12 ದಿನಾಂಕ: 21–05–2012 ಹಾಗೂ 28–07–2012
3. ಜಿಲ್ಲಾ ಪಂಚಾಯಿತಿ ಚಿಕ್ಕಬಳ್ಳಾಪುರ ಇವರ ಪತ್ರ ಸಂ: ಜಿಪಂಚಿ/ಅಭಿವೃದ್ಧಿ/ಜವಿ/ ಪುಅ/ ಅನುದಾನ/ಸಿಆರ್–01/2011–12 ದಿ:06–03–2012
4. ಕಾರ್ಮಿಕ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶಗಳಸಂ.ಎಸ್–11011/5/98–ಬಿಎಲ್(Vo.II) ದಿ:5–11–2012.(ಪ್ರತೇಕ 3 ಆದೇಶಗಳು)

**ಪ್ರಸ್ತಾವನೆ:–**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಕಾರ್ಯ ಯೋಜನೆಯಡಿ ಪ್ರತಿ ಜೀತವಿಮುಕ್ತರ ಪುರ್ನವಸತಿಗಾಗಿ ತಲಾ ರೂ.20,000/– ಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ.50:50ರ ಅನುಪಾತದಲ್ಲಿ ಒದಗಿಸಬೇಕಾಗಿರುತ್ತದೆ. ಮೇಲ್ಕಂಡ ಉಲ್ಲೇಖ (1) ರಿಂದ (3)ರ ವರೆಗಿನ ಪತ್ರಗಳಲ್ಲಿ ಜಿಲ್ಲಾ ಪಂಚಾಯಿತಿಗಳು ಸಲ್ಲಿಸಿರುವ ಪ್ರಸ್ತಾವನೆಗಳಂತೆ, ಕೇಂದ್ರ ಸರ್ಕಾರವು ಮೇಲೆ ಓದಲಾದ ಕ್ರಮ ಸಂ.(4)ರ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಪಂಗಡಕ್ಕೆ ಸೇರಿದ 1 ಜೀತ ವಿಮುಕ್ತರಿಗೆ, ರಾಮನಗರ ಜಿಲ್ಲೆಯ 13 ಜನ ಜೀತ ವಿಮುಕ್ತರಿಗೆ (ಪರಿಶಿಷ್ಟ ಜಾತಿ–11, ಪರಿಶಿಷ್ಟ ಪಂಗಡ–2) ಹಾಗು ಚಿಕ್ಕಬಳ್ಳಾಪುರ ಜಿಲ್ಲೆಯ ಒಟ್ಟು 338 ಜೀತ ವಿಮುಕ್ತರಿಗೆ (ಪರಿಶಿಷ್ಟ ಜಾತಿ–279, ಪರಿಶಿಷ್ಟ ಪಂಗಡ–48, ಇತರೆ–11) ಒಟ್ಟು 352 ಜೀತ ವಿಮುಕ್ತರಿಗೆ ಕೇಂದ್ರದ ಪಾಲಿನ ಜೀತ ವಿಮುಕ್ತರ ಪುನರ್ವಸತಿ ಸಹಾಯಧನವಾದ ಒಟ್ಟಾರೆ ರೂ.35.20ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿರುತ್ತದೆ. ಹಾಗೂ ಈ ಅನುದಾನಕ್ಕೆ ಎದುರಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆಮಾಡಲು ನಿರ್ದೇಶನ ನೀಡಿರುತ್ತದೆ.

ರಾಜ್ಯದ ಆಯವ್ಯಯದಡಿ ಜೀತದಾಳುಗಳ ಪುನರ್ವಸತಿ ಯೋಜನೆಯ ಕಾರ್ಯಕ್ರಮಕ್ಕಾಗಿ 2012–13ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2230–01–198–6–01(ಯೋಜನೆ)ಯಡಿ ಒಟ್ಟು ರೂ407.00ಲಕ್ಷಗಳ ಅನುದಾನವನ್ನು ಕಲ್ಪಿಸಿರುತ್ತದೆ. ಪ್ರಸ್ತುತ ಸದರಿ ಲೆಕ್ಕಶೀರ್ಷಿಕೆಯಡಿ ಲಭ್ಯವಿರುವ ರೂ.339.368

ಲಕ್ಷಗಳ ಅನುದಾನದಿಂದ ಕೇಂದ್ರ ಹಾಗೂ ರಾಜ್ಯದ ಪಾಲಿನ ಪುನರ್ವಸತಿ ಅನುದಾನ ರೂ.70.40ಲಕ್ಷಗಳನ್ನು (ರೂ.ಎಪ್ಪತ್ತು ಲಕ್ಷ ನಲವತ್ತು ಸಾವಿರ ಮಾತ್ರ) 352 ಜೀತವಿಮುಕ್ತರಿಗೆ ಈ ಕೆಳಗೆ ತಿಳಿಸಿರುವಂತೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2012 ಬೆಂಗಳೂರು, ದಿನಾಂಕ: 28–12 –2012**

ಕೇಂದ್ರ ಪುಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ 2012–13ನೇ ಸಾಲಿನಲ್ಲಿ ಒಟ್ಟು 352 ಜೀತ ವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ಕೇಂದ್ರದ ಹಾಗೂ ರಾಜ್ಯದ ಪಾಲಿನ (50:50 ಅನುಪಾತದಲ್ಲಿ) ಒಟ್ಟು ರೂ.70.40ಲಕ್ಷಗಳನ್ನು (ರೂ.ಎಪ್ಪತ್ತು ಲಕ್ಷ ನಲವತ್ತು ಸಾವಿರ ಮಾತ್ರ) ಕೆಳಕಂಡ **ಕೋಷ್ಟಕ**ದಂತೆ ರಾಜ್ಯದ 3 ಜಿಲ್ಲೆಗಳಾದ ಬಳ್ಳಾರಿ, ರಾಮನಗರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅವರ ಬೇಡಿಕೆ ಅನುಸಾರ ಅನುದಾನ ಬಿಡುಗಡೆಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್‌ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

**ಕೋಷ್ಟಕ**

**(ರೂ.ಲಕ್ಷಗಳಲ್ಲಿ)**

| ಕ್ರ ಸಂ. | ಜಿಲ್ಲಾ ಪಂ. ಹೆಸರು | ಜಿಲ್ಲಾ ಪಂಚಾಯಿತಿಯ ಪ್ರಸ್ತಾವನೆ ದಿನಾಂಕ | ಜೀತ ವಿಮುಕ್ತರ ಸಂಖ್ಯೆ | ಜೀತ ವಿಮುಕ್ತಗೊಂಡ ದಿನಾಂಕ ಹಾಗೂ ಪ್ರಕರಣಗಳ ಸಂಖ್ಯೆ | ಕೇಂದ್ರ ಪುರಸ್ಕೃತ ಜೀತ ವಿಮುಕ್ತರ ಕಾರ್ಯ ಯೋಜನೆಯಡಿ ಈಗ ಬಿಡುಗಡೆ ಮಾಡುತ್ತಿರುವ ಒಟ್ಟು ಪುನರ್ವಸತಿ ಸಹಾಯಧನ (50:50 ಅನುಪಾತದಲ್ಲಿ) | | |
|---|---|---|---|---|---|---|---|
| | | | | | ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ತನ್ನ ಪಾಲಿನ ಪುನರ್ವಸತಿ ಸಹಾಯಧನ (ರೂ. ಲಕ್ಷ ಗಳಲ್ಲಿ) | ಕೇಂದ್ರದ ಪಾಲಿಗೆ ಎದುರಾಗಿ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಸಹಾಯಾನುದಾನ (ಲಕ್ಷ ರೂ.ಗಳಲ್ಲಿ) | ಒಟ್ಟು ರೂ ಲಕ್ಷಗಳಲ್ಲಿ |
| 1 | ಬಳ್ಳಾರಿ | 14-7-12 & 7-8-2012 | 01 | 26-3-09 (1) | 0.10 | 0.10 | **0.20** |
| 2 | ರಾಮನಗರ | 21-5-2012 & 28-07-2012 | 13 | i. 9-10-09 (7)<br>ii. 1-12-10 (5)<br>iii. 20-1-12 (1) | 1.3 0 | 1.30 | **2.60** |
| 3 | ಚಿಕ್ಕಬಳ್ಳಾಪುರ | 6-3-2012 | 338 | i. 5-8-10 (130)<br>ii. 20-10-10 (102)<br>iii. 11-12-10 (106) | 33.80 | 33.80 | **67.60** |
| **ಒಟ್ಟು** | **352** | | **35.20** | **35.20** | **70.40** | | |

ಮೇಲ್ಕಂಡ ಕೋಷ್ಟಕದ ಕಲಂ 7ರಲ್ಲಿ ನಮೂದಿಸಿರುವ ರೂ.70.40 ಲಕ್ಷಗಳ ಅನುದಾನವನ್ನು ಈಗ ಬಿಡುಗಡೆಗೊಳಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬಳ್ಳಾರಿ, ರಾಮನಗರ ಮತ್ತು ಚಿಕ್ಕಬಳ್ಳಾಪುರ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ **ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶಕ್ಕೆ ಮಾತ್ರ** ಬಳಸಿಕೊಳ್ಳಲು ಅನುಮತಿಸಲಾಗಿದೆ.

1. ಕೋಷ್ಟಕದಲ್ಲಿ ತೋರಿಸಿರುವ ತಮ್ಮ ಜಿಲ್ಲೆಯ ಜೀತವಿಮುಕ್ತರು ಈ ಹಿಂದೆ ಜೀತದಾಳುಗಳಾಗಿದ್ದರು ಹಾಗೂ ಅವರನ್ನು ಜೀತಕ್ಕಿರಿಸಿಕೊಂಡಿದ್ದ ಮಾಲೀಕರನ್ನು ಫಿರ್ಯಾದು ಮಾಡಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತೆಂಬ ಬಗ್ಗೆ ಧೃಢೀಕರಣವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಪಡೆದುಕೊಂಡು, ಸದರಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವುದು.
2. ಕೇಂದ್ರ ಸರ್ಕಾರದ ದಿನಾಂಕ:05–11–2012ರ ಆದೇಶದಲ್ಲಿ ಸೂಚಿಸಿರುವ ಮಾರ್ಗಸೂಚಿಗಳ ಅನುಸಾರ ಪುನರ್ವಸತಿ ಧನವನ್ನು ವೆಚ್ಚ ಮಾಡತಕ್ಕದ್ದು ಹಾಗೂ ಕೇಂದ್ರ ಪುಸ್ಕೃತ ಜೀತ ವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ ಸ್ವೀಕೃತವಾದ ಪೂರ್ಣ ಅನುದಾನಕ್ಕೆ ಪ್ರತ್ಯೇಕ ವಹಿಯನ್ನು ನಿರ್ವಹಿಸತಕ್ಕದ್ದು.
3. ಭಾರತದ ಕಂಟ್ರೋಲರ್ ಮತ್ತು ಮಹಾಲೇಖಪಾಲರು ಇಚ್ಚೆಪಟ್ಟಲ್ಲಿ ಟೆಸ್ಟ್ ಚೆಕ್‌ಗೆ ಒದಗಿಸಲು ಪ್ರತಿ ಯೋಜನೆವಾರು ವೆಚ್ಚದ ಲೆಕ್ಕಪತ್ರಗಳನ್ನು ಸದರಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ನಿರ್ವಹಿಸತಕ್ಕದ್ದು.
4. 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನ) ಕಾಯ್ದೆ ಹಾಗೂ ಅದರಡಿ ರೂಪಿಸಿರುವ ನಿಯಮಗಳಂತೆ ಗುರುತಿಸಿ ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಜೀತವಿಮುಕ್ತರಿಗೆ ಮಾತ್ರ ಈ ಯೋಜನೆಯಡಿ ಸಹಾಯಸೌಲಭ್ಯಗಳನ್ನು ಕಲ್ಪಿಸತಕ್ಕದ್ದು.
5. ಈ ಯೋಜನೆಯಡಿ ಪುನರ್ವಸತಿ ಸೌಲಭ್ಯವನ್ನು ಒದಗಿಸುವಾಗ ಸುಮಾರು 5 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯಿಂದ ಜೀತಪದ್ಧತಿಯಡಿ ಸಂಕಷ್ಟದಲ್ಲಿದ್ದಂತಹ ಜೀತದಾಳುಗಳಿಗೆ ಆದ್ಯತೆಯನ್ನು ನೀಡತಕ್ಕದ್ದು.

6. **ಈಗ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಸಕ್ತ ಸಾಲಿನಲ್ಲೇ ಖಜಾನೆಯಿಂದ ಸೆಳೆದು ಯಾವುದೇ ಕಾರಣಕ್ಕೂ ಕಾಯ್ದಿರಿಸದೇ ಜೀತವಿಮುಕ್ತರ ಪುನರ್ವಸತಿಗಾಗಿ ಕೂಡಲೇ ಬಳಕೆ ಮಾಡತಕ್ಕದ್ದು.**

7. ವೆಚ್ಚ ಮಾಡಲಾದ ಅನುದಾನಕ್ಕೆ ಹಣಬಳಕೆ ಪ್ರಮಾಣಪತ್ರ ಹಾಗೂ ಆಡಿಟ್ ಮಾಡಲಾದ ತ:ಖ್ತೆಗಳನ್ನು ಸರ್ಕಾರಕ್ಕೆ **15 ದಿನದೊಳಗಾಗಿ** ತಪ್ಪದೇ ಕಳುಹಿಸತಕ್ಕದ್ದು. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಪ್ರತಿ ಮಾಹೆಯೂ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಗಳನ್ನು ಹಾಗೂ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿಗಳು **ಅರ್ಧವಾರ್ಷಿಕ ಪ್ರಗತಿ ವರದಿಯನ್ನು** ನಿಯತಕಾಲಿಕವಾಗಿ ತಪ್ಪದೇ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಕಳುಹಿಸತಕ್ಕದ್ದು.

8. ಈ ಆದೇಶವನ್ನು ಸರ್ಕಾರದ ಆರ್ಥಿಕ ಇಲಾಖೆಯ (ವೆಚ್ಚಗಳು) ಆದೇಶ ಸಂ.ಎಫ್‌ಡಿ/04/ಟಿಎಫ್‌ಪಿ/2012 ಬೆಂಗಳೂರು ದಿನಾಂಕ:27-04-2012 ರಲ್ಲಿನ ಕಂಡಿಕೆ 17ರ ಅನ್ವಯ ಹಾಗೂ ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 82 ಪಿಬಿಎಸ್.2012 ದಿನಾಂಕ:22-12-2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪಾ**
ನಿರ್ದೇಶಕರು ಸ್ವಉಕಾ
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.258**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ **ಚಿಕ್ಕಬಳ್ಳಾಪುರ** ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ 106 ಜನ ಜೀತವಿಮುಕ್ತರಿಗೆ 2012-13ನೇ ಸಾಲಿನಲ್ಲಿ ಪೂರ್ಣ ಮಾಶಾಸನ ಸಹಾಯಾನುಧನವನ್ನು ಮರು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2004 ದಿ: 21/1/2006.

2. ರಾಜ್ಯ ಸರ್ಕಾರದ ಆದೇಶ ಸಂ:ಗ್ರಾಅಪ/05/ಆರ್‌ಬಿಎಲ್-2010 ಬೆಂಗಳೂರು ದಿ: 20/03/2012.

3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರ ಪತ್ರ ಸಂ:ಜಿಪಂಚಿ/ಜೀವಿಕ/ಪು.ಅ/ಅನುದಾನ/ಸಿಆರ್-1/12-13 ದಿ:19/ 7/12.

**ಪ್ರಸ್ತಾವನೆ:-**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ:21.01.2006ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ: 21.01.2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನವನ್ನು **ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.**

ಮೇಲೆ ಓದಲಾದ ಕ್ರಸಂ: (2)ರ ಆದೇಶದಲ್ಲಿ ರಾಜ್ಯ ಸರ್ಕಾರವು ದಿನಾಂಕ:11/12/2010ರಂದು ಉಪವಿಭಾಗಾಧಿಕಾರಿ, ಚಿಕ್ಕಬಳ್ಳಾಪುರ ಉಪವಿಭಾಗ ಇವರಿಂದ ಜೀತವಿಮುಕ್ತಗೊಂಡ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ 106ಜನ ಜೀತವಿಮುಕ್ತರಿಗೆ ಒಟ್ಟು ರೂ.7,63,200.00/-ಗಳ ಮಾಶಾಸನ ಸಹಾಯಾನುಧನವನ್ನು ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಬಿಡುಗಡೆಗೊಳಿಸಲಾಗಿತ್ತು. ಆದರೆ ಸದರಿ ಅನುದಾನವನ್ನು 2011-12ನೇ ಸಾಲಿನಲ್ಲಿ ಖಜಾನೆಯಿಂದ ಸಕಾಲದಲ್ಲಿ ಸೆಳೆಯದೇ ಇರುವ ಕಾರಣ ಲ್ಯಾಪ್ಸ್ ಆಗಿದ್ದು, ಈ ಸಂಬಂಧ ಉಪಖಜಾನಾಧಿಕಾರಿ, ಬಾಗೇಪಲ್ಲಿ ಇವರಿಂದ ಹಣ ನಗದೀಕರಣ ಆಗದೇ ಇರುವ ಕುರಿತು "Non-drawable certificate" ನ್ನು ಪಡೆದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಪ್ರಸ್ತಾಪಿತ ಅನುದಾನವನ್ನು 2012-13ನೇ ಸಾಲಿನಲ್ಲಿ ಮರುಬಿಡುಗಡೆಗೊಳಿಸಲು ಉಲ್ಲೇಖ (3)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಬಾಗೇಪಲ್ಲಿ ತಾಲ್ಲೂಕಿನ 106 ಜೀತ ವಿಮುಕ್ತರಿಗೆ ಮಾಶಾಸನ ಸಹಾಯಾನುಧನವನ್ನು ಒದಗಿಸುವುದು ಅವಶ್ಯವಿದ್ದು, 2012-13ನೇ ಸಾಲಿನಲ್ಲಿ ರಾಜ್ಯ ಸರ್ಕಾರದ ಆಯವ್ಯಯದಡಿ ಲೆಕ್ಕಶೀರ್ಷಿಕೆ 2230-01-198-06-01 ರಡಿ ಲಭ್ಯವಿರುವ ಅನುದಾನದಿಂದ, ರೂ.7,63,200/-ಗಳನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಮರು ಬಿಡುಗಡೆಗೊಳಿಸಲು ತೀರ್ಮಾನಿಸಿದೆ. ಆದರಿಂದ ಈ ಬಿಡುಗಡೆ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.05.ಆರ್‌ಬಿಎಲ್.2012 ಬೆಂಗಳೂರು, ದಿನಾಂಕ: 18-09-2012**

1. ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ 106 ಜನ ಜೀತವಿಮುಕ್ತರಿಗೆ 2012-13ನೇ ಸಾಲಿನಲ್ಲಿ ಒಟ್ಟು 24 ತಿಂಗಳ ಅವಧಿಗೆ (ಡಿಸೆಂಬರ್-2010 ರಿಂದ ನವೆಂಬರ್-2012ರವರೆಗೆ) ತಗಲುವ ಒಟ್ಟು ರೂ.7,63,200/- (ಏಳು ಲಕ್ಷದ ಅರವತ್ತ ಮೂರು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ)ಗಳನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230-ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-198-ಗ್ರಾಮ ಪಂಚಾಯಿತಿಗಳಿಗೆ ಸಹಾಯ-6-ಗ್ರಾಮ ಪಂಚಾಯಿತಿಗಳು-ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)-01-ಬ್ಲಾಕ್ ಅನುದಾನ-300-ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ) ಗೆ ಜಮಾ ಮಾಡತಕ್ಕದ್ದು.

**3.** ಈ ಆದೇಶದಲ್ಲಿ ನಮೂದಿಸಿರುವ ಜೀತ ವಿಮುಕ್ತರ ವಿವರಗಳನ್ನು ಆಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ವರದಿಯ ಆಧಾರದಂತೆ ಪರಿಗಣಿಸಿ ಜೀತ ವಿಮುಕ್ತರಿಗೆ ತಕ್ಷಣದಿಂದಲೇ ಪರಿಹಾರ ನೀಡುವ ಅಗತ್ಯತೆ ಹಿನ್ನಲೆಯಲ್ಲಿ ಮಾಶಾಸನ ಮೊತ್ತವನ್ನು ಮಂಜೂರು ಮಾಡಲಾಗಿದ್ದು, ಸದರಿ ಜೀತ ವಿಮುಕ್ತರ ಇರುವಿಕೆಯ ಬಗ್ಗೆ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿ/ಆಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಮುಖಾಂತರ ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು **ತಪ್ಪದೇ 15 ದಿನದೊಳಗಾಗಿ ಪಾವತಿಸಲು ಕ್ರಮ ಕೈಗೊಳ್ಳುವುದು ಹಾಗೂ ಹಣ ಧೃಡೀಕರಣ ಪತ್ರವನ್ನು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.**

4. ಸರ್ಕಾರದ ಆದೇಶ ಸಂ.ಗ್ರಾ2ಅಪ.15.ಆರ್‌ಬಿಎಲ್.2004 ದಿನಾಂಕ:21.01.2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

5. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 73 ಪಿಬಿಎಸ್.2012 ದಿನಾಂಕ:12–09 2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪಾ**
ನಿರ್ದೇಶಕರು ಸ್ವಉಕಾ
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.259**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:–** ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ರಾಜ್ಯದ 2 ಜಿಲ್ಲೆಗಳ ಒಟ್ಟು 12 ಜೀತ ವಿಮುಕ್ತರಿಗೆ 2012–13ನೇ ಸಾಲಿನಲ್ಲಿ ಕೇಂದ್ರದ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:–**
1. ಜಿಲ್ಲಾ ಪಂಚಾಯಿತಿ ಚಿತ್ರದುರ್ಗಾ ಇವರ ಪತ್ರ ಸಂ:ಜಿಪಂಚಿ/ಅಭಿವೃದ್ಧಿ/ಆರ್‌ಬಿಎಲ್ ಸಿಆರ್ 114 2012–13 ದಿ:27–7–2012
2. ಜಿಲ್ಲಾ ಪಂಚಾಯಿತಿ ಯಾದಗಿರಿ ಇವರ ಪತ್ರ ಸಂ:ಜಿಪಂಯಾ/ಅಭಿ/ಜಿಪಿ/2012–13/2322 ದಿನಾಂಕ:21–09–2012
3. ಕಾರ್ಮಿಕ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶಗಳ ಸಂ.ಎಸ್–11011/05/98–ಬಿಎಲ್(Vo.II)ದಿ:28–01–2013.(ಪ್ರತೇಕ2 ಆದೇಶಗಳು)

**ಪ್ರಸ್ತಾವನೆ:–**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಕಾರ್ಯ ಯೋಜನೆಯಡಿ ಪ್ರತಿ ಜೀತವಿಮುಕ್ತರ ಪುರ್ನವಸತಿಗಾಗಿ ತಲಾ ರೂ.20,000/– ಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ.50:50ರ ಅನುಪಾತದಲ್ಲಿ ಒದಗಿಸಬೇಕಾಗಿರುತ್ತದೆ. ಮೇಲ್ಕಂಡ ಉಲ್ಲೇಖ (1) ರಿಂದ (2)ರ ವರೆಗಿನ ಪತ್ರಗಳಲ್ಲಿ ಆಯಾಯ ಜಿಲ್ಲಾ ಪಂಚಾಯಿತಿಗಳು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಗಳಂತೆ, ಕೇಂದ್ರ ಸರ್ಕಾರವು ಮೇಲೆ ಓದಲಾದ ಕ್ರಮ ಸಂ.(3)ರ ಆದೇಶಗಳಲ್ಲಿ ಯಾದಗಿರಿ ಜಿಲ್ಲೆಯ ಒಟ್ಟು 11 ಜನ (ಪರಿಶಿಷ್ಟ ಜಾತಿ =01 ಹಾಗೂ ಇತರೆ = 10 ಜನ ಜೀತ ವಿಮುಕ್ತರಿಗೆ) ಹಾಗೂ ಚಿತ್ರದುರ್ಗಾ ಜಿಲ್ಲೆಯ =01 ಪರಿಶಿಷ್ಟ ಜಾತಿ ಜೀತ ವಿಮುಕ್ತರಿಗೆ ಒಟ್ಟಾರೆ 12 ಜನ ಜೀತ ವಿಮುಕ್ತರಿಗೆ ಕೇಂದ್ರದ ಪಾಲಿನ ಜೀತ ವಿಮುಕ್ತರ ಪುನರ್ವಸತಿ ಸಹಾಯಧನವಾದ ಒಟ್ಟು **ರೂ.1.20ಲಕ್ಷಗಳ** ಅನುದಾನವನ್ನು ಬಿಡುಗಡೆ ಮಾಡಿರುತ್ತದೆ. ಹಾಗೂ ಈ ಅನುದಾನಕ್ಕೆ ಎದುರಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲು ನಿರ್ದೇಶನ ನೀಡಿರುತ್ತದೆ.

ರಾಜ್ಯದ ಆಯವ್ಯಯದಡಿ ಜೀತದಾಳುಗಳ ಪುನರ್ವಸತಿ ಯೋಜನೆಯ ಕಾರ್ಯಕ್ರಮಕ್ಕಾಗಿ 2012–13ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2230–01–198–6–01(ಯೋಜನೆ)ಯಡಿ ಒಟ್ಟು ರೂ407.00ಲಕ್ಷಗಳ ಅನುದಾನವನ್ನು ಕಲ್ಪಿಸಿರುತ್ತದೆ. ಪ್ರಸ್ತುತ ಸದರಿ ಲೆಕ್ಕಶೀರ್ಷಿಕೆಯಡಿ ಅನುದಾನದಿಂದ ಕೇಂದ್ರ ಹಾಗೂ ರಾಜ್ಯದ ಪಾಲಿನ ಪುನರ್ವಸತಿ ಅನುದಾನ ರೂ.2.40ಲಕ್ಷಗಳನ್ನು (ರೂ.ಎರಡು ಲಕ್ಷದ ನಲವತ್ತು ಸಾವಿರ ಮಾತ್ರ) 12 ಜನ ಜೀತವಿಮುಕ್ತರಿಗೆ ಈ ಕೆಳಗೆ ತಿಳಿಸಿರುವಂತೆ ಬಿಡುಗಡೆ ಮಾಡಲು ನಿರ್ಧರಿಸಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2012 ಬೆಂಗಳೂರು, ದಿನಾಂಕ: 07–03–2013**

ಕೇಂದ್ರ ಪುಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ 2012–13ನೇ ಸಾಲಿನಲ್ಲಿ ಒಟ್ಟು 12 ಜೀತ ವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ಕೇಂದ್ರದ ಹಾಗೂ ರಾಜ್ಯದ ಪಾಲಿನ (50:50 ಅನುಪಾತದಲ್ಲಿ) ಒಟ್ಟು ರೂ.2.40ಲಕ್ಷಗಳನ್ನು (ರೂ.ಎರಡು ಲಕ್ಷದ ನಲವತ್ತು ಸಾವಿರ ಮಾತ್ರ) ಕೆಳಕಂಡ **ಕೋಷ್ಠಕ**ದಂತೆ ರಾಜ್ಯದ 2 ಜಿಲ್ಲೆಗಳಾದ ಯಾದಗಿರಿ ಹಾಗೂ ಚಿತ್ರದುರ್ಗ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅವರ ಬೇಡಿಕೆ ಅನುಸಾರ ಅನುದಾನ ಬಿಡುಗಡೆಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್‌ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

**ಕೋಷ್ಟಕ**

**(ರೂ.ಲಕ್ಷಗಳಲ್ಲಿ)**

| ಕ್ರ.ಸಂ. | ಜಿಲ್ಲಾ ಪಂ. ಹೆಸರು | ಜಿಲ್ಲಾ ಪಂಚಾಯಿತಿಯ ಪ್ರಸ್ತಾವನೆ ದಿನಾಂಕ | ಜೀತವಿಮುಕ್ತರ ಸಂಖ್ಯೆ | ಜೀತ ವಿಮುಕ್ತಗೊಂಡ ದಿನಾಂಕ ಹಾಗೂ ಪ್ರಕರಣಗಳ ಸಂಖ್ಯೆ | ಕೇಂದ್ರ ಪುರಸ್ಕೃತ ಜೀತ ವಿಮುಕ್ತರ ಕಾರ್ಯ ಯೋಜನೆಯಡಿ ಈಗ ಬಿಡುಗಡೆ ಮಾಡುತ್ತಿರುವ ಕೇಂದ್ರ ಹಾಗೂ ರಾಜ್ಯದ ಪಾಲಿನ ಒಟ್ಟು ಪುನರ್ವಸತಿ ಸಹಾಯಧನ (50:50 ಅನುಪಾತದಲ್ಲಿ) | | |
|---|---|---|---|---|---|---|---|
| | | | | | ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ ತನ್ನ ಪಾಲಿನ ಪುನರ್ವಸತಿ ಸಹಾಯಧನ (ರೂ. ಲಕ್ಷಗಳಲ್ಲಿ) | ಕೇಂದ್ರದ ಪಾಲಿಗೆ ಎದುರಾಗಿ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಸಹಾಯಾನುದಾನ (ಲಕ್ಷ ರೂ.ಗಳಲ್ಲಿ) | ಒಟ್ಟು ರೂ ಲಕ್ಷಗಳಲ್ಲಿ |
| 1 | 2 | 3 | | 4 | 5 | 6 | 7 |
| 1 | ಯಾದಗಿರಿ | 21-09-12 | 11 | 01-03-2006=10<br>16-07-2008=01 | 1.10 | 1.10 | **2.20** |
| 2 | ಚಿತ್ರದುರ್ಗಾ | 27-07-12 | 01 | 31-05-2008-01 | 0.10 | 0.10 | **0.20** |
| | | **ಒಟ್ಟು** | **12** | | **1.20** | **1.20** | **2.40** |

ಮೇಲ್ಕಂಡ ಕೋಷ್ಟಕದ ಕಲಂ 7ರಲ್ಲಿ ನಮೂದಿಸಿರುವ ರೂ.2.40 ಲಕ್ಷಗಳ ಅನುದಾನವನ್ನು ಈಗ ಬಿಡುಗಡೆಗೊಳಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಯಾದಗಿರಿ ಮತ್ತು ಚಿತ್ರದುರ್ಗ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ **ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶಕ್ಕೆ ಮಾತ್ರ** ಬಳಸಿಕೊಳ್ಳಲು ಅನುಮತಿಸಲಾಗಿದೆ.

1. ಕೋಷ್ಟಕದಲ್ಲಿ ತೋರಿಸಿರುವ ತಮ್ಮ ಜಿಲ್ಲೆಯ ಜೀತವಿಮುಕ್ತರು ಈ ಹಿಂದೆ ಜೀತದಾಳುಗಳಾಗಿದ್ದರು ಹಾಗೂ ಅವರನ್ನು ಜೀತಕ್ಕಿರಿಸಿಕೊಂಡಿದ್ದ ಮಾಲೀಕರನ್ನು ಫಿರ್ಯಾದು ಮಾಡಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತೆಂಬ ಬಗ್ಗೆ ಧೃಢೀಕರಣವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಪಡೆದುಕೊಂಡು, ಸದರಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವುದು.
2. **ಕೇಂದ್ರ ಸರ್ಕಾರದ ದಿನಾಂಕ:28-01-2013ರ ಆದೇಶದಲ್ಲಿ** ಸೂಚಿಸಿರುವ ಮಾರ್ಗಸೂಚಿಗಳ ಅನುಸಾರ ಪುನರ್ವಸತಿ ಧನವನ್ನು ವೆಚ್ಚ ಮಾಡತಕ್ಕದ್ದು ಹಾಗೂ ಕೇಂದ್ರ ಪುಸ್ಕೃತ ಜೀತ ವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ ಸ್ವೀಕೃತವಾದ ಪೂರ್ಣ ಅನುದಾನಕ್ಕೆ ಪ್ರತ್ಯೇಕ ವಹಿಯನ್ನು ನಿರ್ವಹಿಸತಕ್ಕದ್ದು.
3. ಭಾರತದ ಕಂಟ್ರೋಲರ್ ಮತ್ತು ಮಹಾಲೇಖಪಾಲರು ಇಚ್ಛೆಪಟ್ಟಲ್ಲಿ ಟೆಸ್ಟ್ ಚೆಕ್‌ಗೆ ಒದಗಿಸಲು ಪ್ರತಿ ಯೋಜನೆವಾರು ವೆಚ್ಚದ ಲೆಕ್ಕಪತ್ರಗಳನ್ನು ಸದರಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ನಿರ್ವಹಿಸತಕ್ಕದ್ದು.
4. 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನ) ಕಾಯ್ದೆ ಹಾಗೂ ಅದರಡಿ ರೂಪಿಸಿರುವ ನಿಯಮಗಳಂತೆ ಗುರುತಿಸಿ ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಜೀತವಿಮುಕ್ತರಿಗೆ ಮಾತ್ರ ಈ ಯೋಜನೆಯಡಿ ಸಹಾಯಸೌಲಭ್ಯಗಳನ್ನು ಕಲ್ಪಿಸತಕ್ಕದ್ದು.
5. ಈ ಯೋಜನೆಯಡಿ ಪುನರ್ವಸತಿ ಸೌಲಭ್ಯವನ್ನು ಒದಗಿಸುವಾಗ (ಸುಮಾರು 5 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ) ಅವಧಿಯಿಂದ ಜೀತಪದ್ಧತಿಯಡಿ ಸಂಕಷ್ಟದಲ್ಲಿದ್ದಂತಹ ಜೀತದಾಳುಗಳಿಗೆ ಆದ್ಯತೆಯನ್ನು ನೀಡತಕ್ಕದ್ದು.
6. **ಈಗ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಸಕ್ತ ಸಾಲಿನಲ್ಲೇ ಖಜಾನೆಯಿಂದ ಸೆಳೆದು ಯಾವುದೇ ಕಾರಣಕ್ಕೂ ಕಾಯ್ದಿರಿಸದೇ ಜೀತವಿಮುಕ್ತರ ಪುನರ್ವಸತಿಗಾಗಿ ಕೂಡಲೇ ಬಳಕೆ ಮಾಡತಕ್ಕದ್ದು. ಈ ಅನುದಾನದವು 2012-13ನೇ ಸಾಲಿನ ಆರ್ಥಿಕ ವರ್ಷದಲ್ಲಿ ವ್ಯಪಗತವಾದಲ್ಲಿ ಮುಂದಿನಗ ಸಾಲಿನಲ್ಲಿ ಬಿಡುಗಡೆಗೊಳಿಸಲು ಅವಕಾಶವಿರುವುದಿಲ್ಲ.**
7. ವೆಚ್ಚ ಮಾಡಲಾದ ಅನುದಾನಕ್ಕೆ ಹಣಬಳಕೆ ಪ್ರಮಾಣಪತ್ರ ಹಾಗೂ ಆಡಿಟ್ ಮಾಡಲಾದ ತ:ಖ್ತೆಗಳನ್ನು ಸರ್ಕಾರಕ್ಕೆ **15 ದಿನದೊಳಗಾಗಿ** ತಪ್ಪದೇ ಕಳುಹಿಸತಕ್ಕದ್ದು. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಪ್ರತಿ ಮಾಹೆಯೂ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಗಳನ್ನು ಹಾಗೂ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿಗಳು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ನಿಗದಿ ಪಡಿಸಿದ ಹಕ್ಕುಗಳ ನಮೂನೆಯಲ್ಲಿಯೇ **ಅರ್ಧವಾರ್ಷಿಕ ಪ್ರಗತಿ ವರದಿಯನ್ನು** ನಿಯತಕಾಲಿಕವಾಗಿ ತಪ್ಪದೇ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಕಳುಹಿಸತಕ್ಕದ್ದು.
8. ಈ ಆದೇಶವನ್ನು ಸರ್ಕಾರದ ಆರ್ಥಿಕ ಇಲಾಖೆಯ (ವೆಚ್ಚಗಳು) ಆದೇಶ ಸಂ.ಎಫ್‌ಡಿ/04/ಟಿಎಫ್‌ಪಿ/2012 ಬೆಂಗಳೂರು ದಿನಾಂಕ:27-04-2012 ರಲ್ಲಿನ ಕಂಡಿಕೆ 17ರ ಅನ್ವಯ ಹಾಗೂ ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ.119.ಪಿಬಿಎಸ್.2013 ದಿನಾಂಕ:07-03-2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೀಪಾ**

ನಿರ್ದೇಶಕರು ಸ್ವಉಕಾ

ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.373**

## ಕಂದಾಯ ಸಚಿವಾಲಯ

**ವಿಷಯ:–** ಬೆಂಗಳೂರು ಗ್ರಾಮಾಂತರ, ದಕ್ಷಿಣ ಕನ್ನಡ, ಬೆಳಗಾವಿ, ದಾವಣಗೆರೆ ಹಾಗೂ ಉಡುಪಿ ಜಿಲ್ಲೆಗಳ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡಿಸುವ ಕುರಿತು.

**ಓದಲಾಗಿದೆ:** ಪತ್ರ ಸಂಖ್ಯೆ:ಏಕರೂಪ ಶಾಸನ.ಸಿಆರ್.40/2009–10 ದಿ:06–09–2012

**ಪ್ರಸ್ತಾವನೆ:–**

ದಿನಾಂಕ:07–08–2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ನಿರ್ಣಯದಂತೆ ಅಧಿಸೂಚಿತ ದೇವಾಲಯಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997) ಸೆಕ್ಷನ್ 23(ಎ)(ii)ರನ್ವಯ ಬೆಂಗಳೂರು ಗ್ರಾಮಾಂತರ – 44, ದಕ್ಷಿಣ ಕನ್ನಡ – 14, ಬೆಳಗಾವಿ – 1, ದಾವಣಗೆರೆ – 11 ಹಾಗೂ ಉಡುಪಿ – 1 ಜಿಲ್ಲೆಗಳ ಅಧಿಸೂಚಿತ ಪಟ್ಟಿಯಲ್ಲಿ ಪ್ರಕಟಿಸಬೇಕೆಂದು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿರುವರು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ – 44, ದಕ್ಷಿಣಕನ್ನಡ – 14, ಬೆಳಗಾವಿ – 1, ದಾವಣಗೆರೆ – 11 ಹಾಗೂ ಉಡುಪಿ – 1 ಜಿಲ್ಲೆಗಳ ದೇವಾಲಯಗಳನ್ನು ಅನುಬಂಧ–1 ರಿಂದ 5 ರವರೆಗೆ ಸೂಚಿಸಿರುವಂತೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997) ಸೆಕ್ಷನ್ 23(ಎ)(ii)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

**ಬೆಂಗಳೂರು ಗ್ರಾಮಾಂತರ**

| **ದೊಡ್ಡಬಳ್ಳಾಪುರ ತಾಲ್ಲೂಕು** | | | |
|---|---|---|---|
| **ಕ್ರಸಂ** | **ದೇವಾಲಯದ ಹೆಸರು** | **ಕ್ರಸಂ** | **ದೇವಾಲಯದ ಹೆಸರು** |
| 1 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಕಾಡಲ್ಲಪನಹಳ್ಳಿ | 6 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, (ಶ್ರೀ ಹನುಮಂತ ದೇವರು) ಅರಳುಮಲ್ಲಿಗೆ |
| 2 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಗುಮ್ಮನಹಳ್ಳಿ | 7 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಬೈರಾಪುರ |
| 3 | ಶ್ರೀ ಚನ್ನರಾಯಸ್ವಾಮಿ ದೇವಸ್ಥಾನ, ಹಸನಘಟ್ಟ | 8 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಬೊಮ್ಮನಹಳ್ಳಿ |
| 4 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಭದ್ರಾಪುರ | 9 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ವರದನಹಳ್ಳಿ |
| 5 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಗೂಳ್ಯ | 10 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಪಾಲನಜೋಗಿ ಹಳ್ಳಿ |
| **ದೇವನಹಳ್ಳಿ ತಾಲ್ಲೂಕು** | | | |
| 1 | ಶ್ರೀ ತಿರುಮಲದೇವರು ದೇವಸ್ಥಾನ, ತಿಮ್ಮೇಗೌಡನ ಹೊಸಹಳ್ಳಿ | 2 | ಶ್ರೀ ರಾಮದೇವರು ದೇವಸ್ಥಾನ, ವಿಜಯಪುರ |
| **ನೆಲಮಂಗಲ ತಾಲ್ಲೂಕು** | | | |
| 1 | ಶ್ರೀ ಬಸವಣ್ಣ ದೇವಸ್ಥಾನ, ಮಾಚೋನಾಯ್ಕನಹಳ್ಳಿ | 11 | ಶ್ರೀ ಮುತ್ತುರಾಯಸ್ವಾಮಿ ದೇವಸ್ಥಾನ, ಟಿ. ಬೇಗೂರು |
| 2 | ಶ್ರೀ ನರಸಿಂಹ ದೇವಸ್ಥಾನ, ಅರಿವೆಸಂದ್ರ | 12 | ಶ್ರೀ ಮುತ್ತುರಾಯಸ್ವಾಮಿ ದೇವಸ್ಥಾನ, ಶ್ರೀಪತಿಹಳ್ಳಿ |
| 3 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಕೋಡಿಹಳ್ಳಿ | 13 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಬೈರಶೆಟ್ಟಿಹಳ್ಳಿ |
| 4 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಅವ್ವೇರಹಳ್ಳಿ | 14 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಅರಳಸಂದ್ರ |
| 5 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ನರಸಾಪುರ | 15 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಬೋಳಮಾರನಹಳ್ಳಿ |
| 6 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಮಲ್ಲಾಪುರ | 16 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಅರ್ಜುನಬೆಟ್ಟಹಳ್ಳಿ |
| 7 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ವಾದಕುಂಟೆ | 17 | ಶ್ರೀ ಬಸವಣ್ಣ ದೇವರು ದೇವಸ್ಥಾನ, ಗೊಟ್ಟಿಗೆರೆ |
| 8 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ, ಅನಂತಪುರ | 18 | ಶ್ರೀ ಮಾರಿದೇವರು ದೇವಸ್ಥಾನ, ಮಳೆಕತ್ತಿಗನೂರು |
| 9 | ಶ್ರೀ ಹನುಮಂತ ದೇವರು ದೇವಸ್ಥಾನ, ಬೆಣಚನಹಳ್ಳಿ | 19 | ಶ್ರೀ ಮಾರಮ್ಮ ದೇವರು ದೇವಸ್ಥಾನ, ಬಾಣಸವಾಡಿ |
| 10 | ಶ್ರೀ ಹನುಮಂತ ದೇವರು ದೇವಸ್ಥಾನ, ಎಲೆಕ್ಯಾತನಹಳ್ಳಿ | 20 | ಶ್ರೀ ಪಟಾಲಮ್ಮ ದೇವರು, ಮಾರೋಹಳ್ಳಿ |

| | | | |
|---|---|---|---|
| 21 | ಶ್ರೀ ಪಟ್ಟಲಮ್ಮ ದೇವರು, ದೇಗನಹಳ್ಳಿ | 27 | ಶ್ರೀ ಬೀರೇದೇವರು ದೇವಸ್ಥಾನ, ತಡಸೀಘಟ್ಟ |
| 22 | ಶ್ರೀ ಕನ್ನಿಕಾಪರಮೇಶ್ವರಿ ದೇವಸ್ಥಾನ, ದೊಡ್ಡಬೆಲೆ | 28 | ಶ್ರೀ ಕರಗದ ಮಾರಮ್ಮ ದೇವಸ್ಥಾನ, ತ್ಯಾಮಗೊಂಡ್ಲು |
| 23 | ಶ್ರೀ ರಾಮದೇವರು ದೇವಸ್ಥಾನ, ಹೆಗ್ಗುಂದ | 29 | ಶ್ರೀ ಬೈರೇದೇವರು ದೇವಸ್ಥಾನ, ತೋಟನಹಳ್ಳಿ |
| 24 | ಶ್ರೀ ಸೋಮೇಶ್ವರ ದೇವರು, ಮಣ್ಣೆ | 30 | ಶ್ರೀ ತಿರುಮಲದೇವರು ದೇವಸ್ಥಾನ, ಬಿಲ್ಲಿನಕೋಟೆ |
| 25 | ಶ್ರೀ ವೀರಭದ್ರಸ್ವಾಮಿ ದೇವಸ್ಥಾನ, ದೇವರಹೊಸಹಳ್ಳಿ | 31 | ಶ್ರೀ ವೀರಭದ್ರಸ್ವಾಮಿ ದೇವಸ್ಥಾನ, ಬಿಲ್ಲಿನಕೋಟೆ |
| 26 | ಶ್ರೀ ಚನ್ನರಾಯಸ್ವಾಮಿ ದೇವಸ್ಥಾನ, ಅರೆಬೊಮ್ಮನಹಳ್ಳಿ | 32 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ (ಶ್ರೀ ಹನುಮಂತ ದೇವರು) ಮೇಗಲಪೇಟೆ, ನೆಲಮಂಗಲ ಟೌನ್ |
| | **ಒಟ್ಟು 44 ಧಾರ್ಮಿಕ ಸಂಸ್ಥೆಗಳು** | | |

**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

**ದಕ್ಷಿಣ ಕನ್ನಡ**

| ಕ್ರ. ಸಂ | ದೇವಾಲಯದ ಹೆಸರು |
|---|---|
| | **ಬಂಟ್ವಾಳ ತಾಲ್ಲೂಕು** |
| 1 | ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಕೇಪು |
| 2 | ಶ್ರೀ ಶಂಕರನಾರಾಯಣ ದೇವಸ್ಥಾನ, ಯೆರುಂಬು |
| 3 | ಶ್ರೀ ಪಂಚದುರ್ಗಾಪರಮೇಶ್ವರಿ ದೇವಸ್ಥಾನ, ವಿಟ್ಲ |
| 4 | ಶ್ರೀ ವಿಷ್ಣುಮಂಗಳ ವಿಷ್ಣುಮೂರ್ತಿ ದೇವಸ್ಥಾನ, ಯೆರುಂಬು |
| 5 | ಶ್ರೀ ವಿಷ್ಣುಮೂರ್ತಿ ದೇವಸ್ಥಾನ, ಮಾಣಿಲ |
| 6 | ಶ್ರೀ ಸುಬ್ರಾಯ ದೇವಸ್ಥಾನ, ಕೇಪು |
| 7 | ಶ್ರೀ ಧೂಮಾವತಿ ದೇವಸ್ಥಾನ, ಕೇಪು |
| 8 | ಶ್ರೀ ಪಂಜುರ್ಲಿ ಭೂತ ದೈವಸ್ಥಾನ, ಪೆರುವಾಯಿ |
| 9 | ಶ್ರೀ ವಿಷ್ಣುಮೂರ್ತಿ ದೇವಸ್ಥಾನ, ಕುಂಡಕ್ಕ |
| 10 | ಶ್ರೀ ವಿಟ್ಲವೆಂಕಟರಮಣ ಮತ್ತು ಪಡ್ನೂರು ವೆಂಕಟರಮಣ ದೇವಸ್ಥಾನ, ವಿಟ್ಲ |
| 11 | ಶ್ರೀ ಜಠಾದಾರಿ ದೇವರು ದೇವಸ್ಥಾನ, ವಿಟ್ಲ |
| 12 | ಶ್ರೀ ಬೈದ್ಯಾರಿ ಭಟ್ಟಣ್ಣಾಯ ದೇವಸ್ಥಾನ, ಕನ್ಯಾನ |
| 13 | ಶ್ರೀ ಉಮಾಮಹದೇಶ್ವರಿ ದೇವಸ್ಥಾನ, ವಕ್ಕೆತ್ತೂರು |
| 14 | ಶ್ರೀ ಕಾಶಿವಿಶ್ವೇಶ್ವರ ದೇವಸ್ಥಾನ, ವಿಟ್ಲ |
| | **ಒಟ್ಟು 14 ಧಾರ್ಮಿಕ ಸಂಸ್ಥೆಗಳು** |

**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

**ಬೆಳಗಾವಿ**

| ಕ್ರ. ಸಂ | ದೇವಾಲಯದ ಹೆಸರು |
|---|---|
| | **ರಾಯಭಾಗ ತಾಲ್ಲೂಕು** |
| 1 | ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನ, ಮೊರಬ (ಬಿಪಿಟಿ ಕಾಯ್ದೆ) |
| | **ಒಟ್ಟು 1 ಧಾರ್ಮಿಕ ಸಂಸ್ಥೆಗಳು** |

**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

**ದಾವಣಗೆರೆ**

| ಕ್ರ. ಸಂ | ದೇವಾಲಯದ ಹೆಸರು |
|---|---|
| | **ದಾವಣಗೆರೆ ತಾಲ್ಲೂಕು** |
| 1 | ಶ್ರೀ ಹನುಮಂತ ದೇವಸ್ಥಾನ, ಲೋಕಿಕರೆ |
| 2 | ಶ್ರೀ ಹನುಮಂತ ದೇವಸ್ಥಾನ, ಗುಮ್ಮನೂರು |
| 3 | ಶ್ರೀ ಗ್ರಾಮದೇವತೆ ದೇವಸ್ಥಾನ, ಸಿದ್ಧನೂರು |
| 4 | ಶ್ರೀ ಪ್ರಾಣದೇವರು ದೇವಸ್ಥಾನ, ಆನಗೋಡು |
| | **ಹೊನ್ನಾಳಿ ತಾಲ್ಲೂಕು** |
| 1 | ಶ್ರೀ ಬಸವಣ್ಣ ದೇವರು ದೇವಸ್ಥಾನ, ದೊಡ್ಡೆತ್ತಿನಹಳ್ಳಿ |
| 2 | ಶ್ರೀ ಗ್ರಾಮದೇವತೆ ದೇವಸ್ಥಾನ, ಹರಳಹಳ್ಳಿ |
| 3 | ಶ್ರೀ ಮಾರಮ್ಮ ದೇವಸ್ಥಾನ, ಹುಣಸಘಟ್ಟ |
| 4 | ಶ್ರೀ ಹನುಮಂತ ದೇವಸ್ಥಾನ, ಚಟ್ನಿಹಳ್ಳಿ |
| 5 | ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನ, ತುಗ್ಗಲಹಳ್ಳಿ |
| 6 | ಶ್ರೀ ಕರಿಯಮ್ಮ ದೇವಸ್ಥಾನ, ನೆಲಹೊನ್ನೆ |
| 7 | ಶ್ರೀ ಬಸವಣ್ಣ ದೇವರು ದೇವಸ್ಥಾನ, ದೇವನಾಯ್ಕನಹಳ್ಳಿ |
| | **ಒಟ್ಟು 11 ಧಾರ್ಮಿಕ ಸಂಸ್ಥೆಗಳು** |

**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ:ಕಂಇ 114 ಮುಆಬಿ 2012; ಬೆಂಗಳೂರು, ದಿನಾಂಕ: 05ನೇ ಜನವರಿ 2013**

**ಉಡುಪಿ**

| ಕ್ರ. ಸಂ | ದೇವಾಲಯದ ಹೆಸರು |
|---|---|
| | **ಕಾರ್ಕಳ ತಾಲ್ಲೂಕು** |
| 1 | ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಕುಕ್ಕುಂದೂರು |
| | **ಒಟ್ಟು 1 ಧಾರ್ಮಿಕ ಸಂಸ್ಥೆಗಳು** |

**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.324**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಗೂಳ್ಯ ನಂದಿಗುಂದ ಗ್ರಾಮದ ಶ್ರೀ ಬಸವೇಶ್ವರಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಬಗ್ಗೆ

**ಓದಲಾಗಿದೆ:** (1) ರಾಜ್ಯ ಧಾರ್ಮಿಕ ಪರಿಷತ್ತಿನ ನಡವಳಿ ದಿನಾಂಕ:26.09.2012

(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 05 ಸಿಆರ್ 15/2012–13, ದಿನಾಂಕ:10.10.2012

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರ ದಿನಾಂಕ:10.10.2012ರಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬಗೆರೆ ಹೋಬಳಿ, ಗೂಳ್ಯ ನಂದಿಗುಂದ ಗ್ರಾಮದ ಶ್ರೀ ಬಸವೇಶ್ವರಸ್ವಾಮಿ ದೇವಾಲಯಕ್ಕೆ ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ತಮ್ಮ ಆದೇಶ ಸಂಖ್ಯೆ:ಡಿವಿಎಸ್(ಎ)/ಸಿಆರ್/25/2012–13 ದಿನಾಂಕ:03.05.2012 ರ ಅನ್ವಯ ವಾರ್ಷಿಕ ರೂ.750/– ಅಂತಿಮ ತಸ್ತೀಕ್ ಭತ್ಯೆಯನ್ನು ನಿಗಧಿಪಡಿಸಿರುತ್ತಾರೆ. ಕರ್ನಾಟಕ ಇನಾಂ ರದ್ದಿಯಾತಿ ಕಾಯ್ದೆ, (1955)ರ ಅಡಿಯಲ್ಲಿ ತಸ್ತೀಕ್ ಭತ್ಯೆ ಮಂಜೂರಾಗಿದ್ದಲ್ಲಿ ಅಂತಹ ಸಂಸ್ಥೆಯನ್ನು ಕರ್ನಾಟಕ ಹಿಂದೂ ಧಾರ್ಮಿಕ

ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಿಮ, (1997) ಸೆಕ್ಷನ್ 23(ಎ)(ii) ಅನ್ವಯ ಅಧಿಸೂಚಿತ ಸಂಸ್ಥೆಯಾಗಿ ಪ್ರಕಟಿಸಬೇಕಾಗಿದೆ ಎಂದು ತಿಳಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ದಿನಾಂಕ:26.09.2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲು ನಿರ್ಣಯಿಸಲಾಗಿರುವುದರಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ನಂದಿಗುಂದ ಗ್ರಾಮದ ಶ್ರೀ ಬಸವೇಶ್ವರಸ್ವಾಮಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997)ರ ಸೆಕ್ಷನ್ 23(ಎ)(ii)ರ ಅಡಿಯಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇಪರ್ಡೆಗೊಳಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವರು.

ಸದರಿ ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 122 ಮುಆಬಿ 2012; ಬೆಂಗಳೂರು, ದಿನಾಂಕ: 08ನೇ ಜನವರಿ. 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ನಂದಿಗುಂದ ಗ್ರಾಮದ ಶ್ರೀ ಬಸವೇಶ್ವರಸ್ವಾಮಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಸೆಕ್ಷನ್ 23(ಎ)(ii)ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.321**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬಾ ಹೋಬಳಿ, ಮಾಚೋನಾಯಕನಹಳ್ಳಿ ಗ್ರಾಮದ ಶ್ರೀ ಬಸವಣ್ಣದೇವರು ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವ ಬಗ್ಗೆ

**ಓದಲಾಗಿದೆ:** (1) ರಾಜ್ಯ ಧಾರ್ಮಿಕ ಪರಿಷತ್ತಿನ ನಡವಳಿ ದಿನಾಂಕ:26.09.2012

(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 05 ಸಿಆರ್ 74/2011–12, ದಿನಾಂಕ:11.10.2012

**ಪ್ರಸ್ತಾವನೆ:–**

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬಾ ಹೋಬಳಿ, ಮಾಚೋನಾಯಕನಹಳ್ಳಿ ಗ್ರಾಮದ ಶ್ರೀ ಬಸವಣ್ಣ ದೇವರು ದೇವಾಲಯಕ್ಕೆ ಜಿಲ್ಲಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಆದೇಶ ಸಂಖ್ಯೆ:ಡಿವಿಎಸ್(ಬಿ)/ಸಿಆರ್/176/2011–12 ದಿನಾಂಕ:08.03.2012 ರ ಅನ್ವಯ ವಾರ್ಷಿಕ ರೂ.411/– ಅಂತಿಮ ತಸ್ಥೀಕ್ ಭತ್ಯೆಯನ್ನು ನಿಗಧಿಪಡಿಸಿರುತ್ತಾರೆ. ಇದರಿಂದಾಗಿ ಈ ಸಂಸ್ಥೆಯು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಿಮ, (1997) ಸೆಕ್ಷನ್ 23(ಎ)(ii) ಅನ್ವಯ ಅಧಿಸೂಚಿತ ಸಂಸ್ಥೆಯಾಗಿ ಪ್ರಕಟಿಸಬೇಕಾಗಿದೆ ಎಂದು ತಿಳಿಸಿರುತ್ತಾರೆ. ಸದರಿ ಪ್ರಸ್ತಾವನೆಯ ಬಗ್ಗೆ ದಿನಾಂಕ:26.09.2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲು ನಿರ್ಣಯಿಸಲಾಗಿರುವುದರಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬಾ ಹೋಬಳಿ, ಮಾಚೋನಾಯಕನಹಳ್ಳಿ ಗ್ರಾಮದ ಶ್ರೀ ಬಸವಣ್ಣ ದೇವರು ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997)ರ ಸೆಕ್ಷನ್ 23(ಎ)(ii)ರ ಅಡಿಯಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇಪರ್ಡೆಗೊಳಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವರು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 121 ಮುಆಬಿ 2012; ಬೆಂಗಳೂರು, ದಿನಾಂಕ: 11ನೇ ಜನವರಿ. 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬಾ ಹೋಬಳಿ, ಮಾಚೋನಾಯಕನಹಳ್ಳಿ ಗ್ರಾಮದ ಶ್ರೀ ಬಸವಣ್ಣದೇವರು ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಸೆಕ್ಷನ್ 23(ಎ)(ii)ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.322**

## ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ, ವಾರ್ಡ್ ನಂ.22, ಬ್ಲಾಕ್ ನಂ.21 ಬಂಡೆಟ್ಟಿ ರೋಡ್, ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಘೋಷಿತ ಸಂಸ್ಥೆ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** (1) ರಾಜ್ಯ ಧಾರ್ಮಿಕ ಪರಿಷತ್ತಿನ ನಡವಳಿ ದಿನಾಂಕ:26.09.2012

(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 08 ಸಿಆರ್ 156/2011–12, ದಿನಾಂಕ:02.11.2012

**ಪ್ರಸ್ತಾವನೆ:–**

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ ವಾರ್ಡ್ ನಂ.22, ಬ್ಲಾಕ್ ನಂ.21 ಬಂಡೆಟ್ಟಿ ರೋಡ್, ಶ್ರೀ ಆಂಜನೇಯಸ್ವಾಮಿ ದೇವಾಲಯವು ಸಾರ್ವಜನಿಕ ಹಿಂದೂ ಧಾರ್ಮಿಕ ಸಂಸ್ಥೆಯಾಗಿರುತ್ತದೆ. ಸದರಿ ಸಂಸ್ಥೆಗೆ ದಿನಾಂಕ:15.06.1929ರಲ್ಲಿ ಜಮೀನನ್ನು ದೇವಾಲಯದ ಉದ್ದೇಶಗಳಿಗೆ ದಾನ ನೀಡಿದ್ದು, ಆಸ್ತಿಯನ್ನು ಮೂಲ ಉದ್ದೇಶಕ್ಕಾಗಿ ಬಳಸುವುದು ಅಗತ್ಯವಾಗಿದ್ದು, ದೇವಾಲಯದ ಸಮಗ್ರ ಅಭಿವೃದ್ಧಿಗಾಗಿ ಕಲಂ 42ರ ರೀತ್ಯಾ ಘೋಷಿತ ಸಂಸ್ಥೆ ಎಂದು ಆದೇಶ ಹೊರಡಿಸಲು ದಿನಾಂಕ:05.12.2011ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ವರದಿ ಮಾಡಿದ್ದು, ದಿನಾಂಕ:28.01.2012ರ ರಾಜ್ಯ ಧಾರ್ಮಿಕ ಪರಿಷತ್ತಿನ 7ನೇ ಸಭೆಯ ನಿರ್ಣಯ ಸಂಖ್ಯೆ:(5) ರಲ್ಲಿ ಸಂಬಂಧಿಸಿದ ದೇವಾಲಯದ ಆಡಳಿತದವರಿಗೆ ನೋಟೀಸ್ ನೀಡಿ ಅವರ ಉತ್ತರದೊಂದಿಗೆ ಮಂಡಿಸಲು ತೀರ್ಮಾನಿಸಲಾಗಿತ್ತು. ಅದರಂತೆ ದಿನಾಂಕ:16.06.2012ರಂದು ದೇವಾಲಯದ ಕಾರ್ಯದರ್ಶಿಯವರಿಗೆ ಬಳ್ಳಾರಿ ಸಹಾಯಕ ಆಯುಕ್ತರ ಮೂಲಕ ನೋಟೀಸ್ ಜಾರಿಗೊಳಿಸಲಾಗಿತ್ತು. ದೇವಾಲಯದ ಆಡಳಿತದಿಂದ ಯಾವುದೇ ಸಮಜಾಯಿಷಿ ಸ್ವೀಕೃತವಾಗಿಲ್ಲ. ಆದ್ದರಿಂದ ಜಿಲ್ಲಾಧಿಕಾರಿಗಳ ವರದಿಯನ್ವಯ ಈ ದೇವಾಲಯವನ್ನು ಅಧಿಸೂಚಿತ ಸಂಸ್ಥೆಯೆಂದು ಘೋಷಿಸಲು ದೇವಾಲಯದ ಆಡಳಿತ ಮಂಡಳಿಗೆ ಯಾವುದೇ ಆಕ್ಷೇಪವಿರುವುದಿಲ್ಲ ಎಂಬುದನ್ನು ಸಭೆಯು ಗಮನಿಸಿ ಈ ದೇವಾಲಯವನ್ನು ಸೆಕ್ಷನ್ 42 ಮತ್ತು 43 ರ ಅನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಲು ಮೇಲೆ (1)ರಲ್ಲಿ ಓದಲಾದ ರಾಜ್ಯ ಧಾರ್ಮಿಕ ಪರಿಷತ್ ಸಭೆಯಲ್ಲಿ ನಿರ್ಣಯಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ವರದಿ ಮೇರೆಗೆ ಹಾಗೂ ದಿನಾಂಕ:26.09.2012ರ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯ ನಿರ್ಣಯರನ್ವಯ ಶ್ರೀ ಆಂಜನೇಯಸ್ವಾಮಿ ದೇವಾಲಯ, ವಾರ್ಡ್ ನಂ.22, ಬ್ಲಾಕ್ ನಂ.21, ಬಂಡೆಟ್ಟಿ ರೋಡ್, ಬಳ್ಳಾರಿ ನಗರ ಈ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997)ರ ಸೆಕ್ಷನ್ 42 ಮತ್ತು 43ರ ಅನ್ವಯ ಘೋಷಿತ ಸಂಸ್ಥೆಯೆಂದು ಸರ್ಕಾರದ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವರು.

ಸದರಿ ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 118 ಮುಆಬಿ 2012; ಬೆಂಗಳೂರು, ದಿನಾಂಕ: 11ನೇ ಜನವರಿ. 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ ವಾರ್ಡ್ ನಂ.22, ಬ್ಲಾಕ್ ನಂ.21 ಬಂಡೆಟ್ಟಿ ರೋಡ್, ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ಕಲಂ 42 ಮತ್ತು 43 ಅನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.323**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2012–13ನೇ ಸಾಲಿನಲ್ಲಿ ರಾಜ್ಯದ ಮಂಡ್ಯ ಜಿಲ್ಲಾ ಪಂಚಾಯತಿಗೆ ರಾಜ್ಯದ ಪಾಲಿನ 1ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಎಫ್‌ಟಿಎಸ್ ಫೈಲ್ಸ್ ನಂ.18080/2012 ಸಂಖ್ಯೆ:ಜಿ–20011/2/2012 ಎಸ್‌ಜಿಎಸ್‌ವೈ(1) ದಿನಾಂಕ 11.04.2012.
2. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ:ಜೆ–11060/7/2012 ಎಸ್‌ಜಿಎಸ್‌ವೈ (I)(12)ದಿನಾಂಕ 01.06.2012.
3. ಕೇಂದ್ರ ಸರ್ಕಾರದ ಅನುದಾನ ಜಮೆ ದಿನಾಂಕ 18.06.2012.
4. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿಯ ಆರ್‌ಎಲ್ –ಎಫ್‌ಟಿಎಸ್ 19407 ದಿನಾಂಕ 05.07.2012.
5. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ:ಆಇ 366 ವೆ–06/2012 ದಿನಾಂಕ 26–09–2012 ಮತ್ತು 26–11–2012.
6. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 24 ಎಸ್‌ಜೆವೈ 2012 ಬೆಂಗಳೂರು, ದಿನಾಂಕ 10.08.2012.
7. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 43 ಎಸ್‌ಜೆವೈ 2012 ಬೆಂಗಳೂರು, ದಿನಾಂಕ 15.11.2012, ತಿದ್ದುಪಡಿ ಸಮ ಸಂಖ್ಯೆ ದಿನಾಂಕ 17.11.2012 ಮತ್ತು ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ 12.12.2012.
8. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ:ಜೆ–12022/4/2011 ಎಸ್‌ಜಿಎಸ್‌ವೈ (I)(11 )ದಿನಾಂಕ 03.01.2013
9. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ:ಆಇ 366 ವೆ–06/2012 ದಿನಾಂಕ 15.02.2013.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಓದಲಾಗಿದೆ (1)ರಲ್ಲಿ ಎಸ್‌ಜಿಎಸ್‌ವೈ/ ಎನ್‌ಆರ್‌ಎಲ್‌ಎಂ ಯೋಜನೆ ಅನುಷ್ಠಾನಕ್ಕಾಗಿ ರೂ.1,17,02,67,000/– ಹಂಚಿಕೆ ಮಾಡಿದೆ. ಈ ಪೈಕಿ ಕೇಂದ್ರದ ಪಾಲು ರೂ.87,77,00,000/– ಹಾಗೂ ರಾಜ್ಯದ ಪಾಲು ರೂ.29,25,67,000/– ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಓದಲಾಗಿದೆ (2) ಮತ್ತು (4) ರನ್ವಯ ರಾಜ್ಯದ 25 ಜಿಲ್ಲಾ ಪಂಚಾಯತ್‌ಗಳಿಗೆ ರೂ.38,10,29,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.12,70,10,000/– ಬಿಡುಗಡೆ ಮಾಡಬೇಕಾಗಿದೆ. ಆದರೆ, 2012–13ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಯಾವುದೇ ಅನುದಾನವನ್ನು ಕಾಯ್ದಿರಿಸಿರುವುದಿಲ್ಲ. ಏಕೆಂದರೆ, ಕೇಂದ್ರ ಸರ್ಕಾರ 2012–13ನೇ ಸಾಲಿಗೆ ಎಸ್‌ಜಿಎಸ್‌ವೈ ಯೋಜನೆಯ ಬದಲಿಗೆ ಆಜೀವಿಕ (ಎನ್‌ಆರ್‌ಎಲ್‌ಎಂ) ಜಾರಿಗೆ ಬರುವುದಾಗಿ ತಿಳಿಸಿದ್ದರಿಂದ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2012–2013ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಯಾವುದೇ ಅನುದಾನ ಕಾಯ್ದಿರಿಸಿಕೊಂಡಿರುವುದಿಲ್ಲ. ಆದರೆ 2012–13ನೇ ಸಾಲಿಗೆ ಎಸ್‌ಜಿಎಸ್‌ವೈ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರವು ರಾಜ್ಯದ 25 ಜಿಲ್ಲಾ ಪಂಚಾಯತ್‌ಗೆ 1ನೇ ಕಂತಿನ ಅನುದಾನ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲೇಬೇಕಾಗಿರುತ್ತದೆ. ಆದ್ದರಿಂದ ಎಸ್‌ಜಿಎಸ್‌ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಕಾಯ್ದಿರಿಸಲಾಗಿರುವ ಅನುದಾನದಿಂದ ಬಿಡುಗಡೆ ಮಾಡಬೇಕಾಗಿದೆ.

ಎಸ್‌ಜಿಎಸ್ ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)) 2012–2013 ನೇ ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒಟ್ಟಾರೆ ಅನುದಾನ ಬಿಡುಗಡೆಗಾಗಿ ರೂ.1,20,00,00,000/– ಕಾಯ್ದಿರಿಸಲಾಗಿದೆ. ಈ ಪೈಕಿ ರಾಜ್ಯದ ಪಾಲಿನ ಅನುದಾನ ಬಿಡುಗಡೆಗಾಗಿ ರೂ.30,00,00,000/– ಆರ್ಥಿಕ ಇಲಾಖೆ ಓದಲಾಗಿದೆ (5) ಮತ್ತು (9)ರಲ್ಲಿ ರಾಜ್ಯ ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ರೂ.12,70,10,000/– ಒದಗಿಸಿತ್ತು. ಈ ಅನುದಾನವನ್ನು ಕೇಂದ್ರ ಸರ್ಕಾರ 25 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿದ್ದ ರೂ.38,10,29,000/–ಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ರೂ.12,70,10,000/– ಬಿಡುಗಡೆ ಮಾಡಲಾಗಿದೆ.

ಕೇಂದ್ರ ಸರ್ಕಾರ ಓದಲಾಗಿದೆ (8)ರಲ್ಲಿ ಮಂಡ್ಯ ಜಿಲ್ಲಾ ಪಂಚಾಯತ್‌ಗೆ 2012–13ನೇ ಒಂದನೇ ಕಂತಿನ ಅನುದಾನ ರೂ.1,64.56,000/– ಬಿಡುಗಡೆ ಮಾಡಿದೆ. ಆರ್ಥಿಕ ಇಲಾಖೆ ಓದಲಾಗಿದೆ (9)ರಲ್ಲಿ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ರೂ.54.85,000/– ಬಿಡುಗಡೆ ಮಾಡಲು ಸಹಮತಿ ನೀಡಿದೆ. ಇದರಂತೆ ಮಂಡ್ಯ ಜಿಲ್ಲಾ ಪಂಚಾಯತ್‌ಗೆ ರೂ.54.85,000/– ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 43 ಎಸ್‌ಜೆವೈ 2012, ಬೆಂಗಳೂರು, ದಿನಾಂಕ : 04.03.2013**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2012–13ನೇ ಸಾಲಿಗೆ ಅನುಬಂಧದಲ್ಲಿ ತೋರಿಸಿರುವ ರಾಜ್ಯದ ಮಂಡ್ಯ ಜಿಲ್ಲಾ ಪಂಚಾಯತ್‌ಗೆ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ರೂ.54,85,000/– (ಐವತ್ತನಾಲ್ಕು ಲಕ್ಷ ಎಂಭತ್ತೈದು ಸಾವಿರ ರೂಪಾಯಿಗಳು ಮಾತ್ರ) ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ನಿಗಧಿಪಡಿಸಿರುವ 300 lump sum ಅನುದಾನದಿಂದ ಭರಿಸಿ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**(ರೂ.ಗಳಲ್ಲಿ)**

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಡಿ.ಡಿ.ಓ.ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ ಕಂತಿನ ಅನುದಾನ |
|---|---|---|---|---|
| **1** | **2** | **3** | **4** | **5** |
| 1 | ಮಂಡ್ಯ | 1100ZZ0001 | 1,64,56,000-00 | 54,85,000-00 |

**ಷರತ್ತುಗಳು:** 1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ [ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)] 2012–2013 ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05) ರಡಿ ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ರಾಜ್ಯದ ಆಯವ್ಯಯದಲ್ಲಿ 300 lump sum ನಲ್ಲಿ ಒದಗಿಸಿರುವ ಅನುದಾನದಿಂದ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಮಂಡ್ಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ

ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು. ಇದಲ್ಲದೆ ಓದಲಾಗಿದೆ 6ರ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಸಹ ತಪ್ಪದೆ ಪಾಲಿಸುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2012–13ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಮಂಡ್ಯ ಜಿಲ್ಲಾ ಪಂಚಾಯತಿಯ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಮಂಡ್ಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 102 ಪಿಬಿಎಸ್ 2013 ದಿನಾಂಕ 02.03.2013 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪಾ**
ನಿರ್ದೇಶಕರು ಸ್ವಉಕಾ
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.372**

## ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09.05.2012, 05.06.2012, 25.06.2012, 03.07.2012, 23.07.2012, 06.08.2012, 31.08.2012, 06.09.2012, 04.10.2012, 08.10.2012, 02.11.2012, 15.11.2012 ಮತ್ತು 14.12.2012

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಸರ್ಕಾರವು 2012–13ನೇ ಸಾಲಿನ ಜನವರಿ–2013ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 11–01–2013

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಜನವರಿ–2013ರ ತಿಂಗಳಿನಲ್ಲಿ ರೂ. **250/–** ಕೋಟಿಗಳ (ಕೋಟಿ ರೂ. ಇನ್ನೂರ ಐವತ್ತು ರೂಪಾಯಿಗಳು

ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಮತ್ತು ಹುಕ್ಕೇರಿ ಗ್ರಾಮೀಣಾ ವಿದ್ಯುತ್ ಸಹಕಾರ ಸಂಘಕ್ಕೆ ವಿದ್ಯುತ್ ಪೂರೈಕೆಗೆ ಸಹಾಯಧನ (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿದೆ.

**(ರೂ. ಕೋಟಿಗಳಲ್ಲಿ)**

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ | 2012–13ರ ಜನವರಿ 2013ರ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಚಾವಿಸನಿನಿಗೆ ನೇರ ಬಿಡುಗಡೆ |
|---|---|---|---|---|---|---|---|
| 1 | 2 | 3 | 4 | 5 | 7 | 8 | 9 |
| ಬೆವಿಕಂ | 33.00 | 2.00 | **35.00** | 35.00 | 0.00 | 0.00 | 0.00 |
| ಮವಿಕಂ | 16.00 | 0.00 | **16.00** | 6.00 | 0.00 | 5.00 | 5.00 |
| ಹುವಿಕಂ | 99.00 | 3.00 | **102.00** | 45.00 | 32.00* | 22.00 | 3.00 |
| ಗುವಿಕಂ | 55.00 | 2.00 | **57.00** | 40.00 | 15.00 | 1.00 | 1.00 |
| ಚಾವಿಸನಿನಿ | 39.00 | 1.00 | **40.00** | 15.00 | 15.00 | 10.00 | 0.00 |
| **ಒಟ್ಟು** | **242.00** | **8.00** | **250.00** | **141.00** | **62.00** | **38.00** | **9.00** |

2. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

3. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ **32**/–ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. **2**/–ಕೋಟಿಗಳೆಂದು ಲೆಕ್ಕೀಕರಿಸುವುದು.

4. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಸಹಾಯಧನವನ್ನು ಮೇಲಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿದೆ.

5. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳ ಪರವಾಗಿ ಬೆವಿಕಂಗೆ ಬಿಡುಗಡೆ ಮಾಡಿರುವ ರೂ. **38**/–ಕೋಟಿಗಳ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL) ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚದ ಬಾಬ್ತು ಆಗಿರುತ್ತದೆ.

6. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. **9**/–ಕೋಟಿಗಳ ಸಹಾಯಧನವನ್ನು JSW ದಿಂದ ಖರೀದಿಸಿರುವ ವಿದ್ಯುತ್ ಖರೀದಿ ವೆಚ್ಚ ಬಾಬ್ತು ಆಗಿರುತ್ತದೆ.

7. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 141/–ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

10. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

11. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ 11 ವೆಚ್ಚ–1/13 ದಿನಾಂಕ 10.01.2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ ಎ ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**PR.245**

## ಇಂಧನ ಸಚಿವಾಲಯ

**ವಿಷಯ:** 2012-13ನೇ ಸಾಲಿಗೆ ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳು ಕೈಗೊಂಡಿರುವ ಕಾಮಗಾರಿಗಳಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27.04.2012
2. ಸರ್ಕಾರಿ ಆದೇಶ ಸಂಖ್ಯೆ ಇಎನ್ 22 ಪಿಎಸ್‌ಆರ್ 2012 ದಿನಾಂಕ 27.04.2012
3. ಸಮಾಜ ಕಲ್ಯಾಣ ಇಲಾಖೆಯ ಅ.ಟಿ ಸಂಖ್ಯೆ: ಸಕಇ 31 ಎಸ್‌ಎಲ್‌ಪಿ 2012 ದಿನಾಂಕ: 11.07.2012.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 31 ಪಿಎಸ್‌ಆರ್ 2012 ದಿನಾಂಕ 17.07.2012, 18.10.2012 ಮತ್ತು 04.12.2012.

**ಪ್ರಸ್ತಾವನೆ:**

1. 2012-13ನೇ ಸಾಲಿನ ಆಯವ್ಯಯದ ಅಂದಾಜಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆಗೆ ಇಂಧನ ಇಲಾಖೆಯ ಲೆಕ್ಕಶೀರ್ಷಿಕೆ 4801-80-190-0-02-422ಯಡಿ ರೂ 3500.00 ಲಕ್ಷಗಳನ್ನು ಒದಗಿಸಿದೆ. ಸಮಾಜ ಕಲ್ಯಾಣ ಇಲಾಖೆ ರೂ. 3000 ಲಕ್ಷಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದೆ.
2. ಸಮಾಜ ಕಲ್ಯಾಣ ಇಲಾಖೆಯ ನಡವಳಿ ದಿನಾಂಕ: 11.07.2012ರ ಪ್ರಕಾರ ಇಂಧನ ಇಲಾಖೆ ಸಲ್ಲಿಸಿರುವ ವಿಸಕಂಗಳ ಕ್ರಿಯಾಯೋಜನೆಗಳನ್ನು ಅನುಮೋದಿಸಲಾಗಿದೆ. ಈ ಅನುದಾನವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ದೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಬಳಸಲು ಸೂಚಿಸಿದೆ.
3. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 17.07.2012, 18.10.2012 ಮತ್ತು 04.12.2012 ರಲ್ಲಿ ರೂ. 1000 ಲಕ್ಷಗಳು, ರೂ. 750 ಲಕ್ಷಗಳು ಮತ್ತು ರೂ. 500 ಲಕ್ಷಗಳನ್ನು ಕ್ರಮವಾಗಿ ಈಗಾಗಲೆ ಬಿಡುಗಡೆ ಮಾಡಿದೆ.
4. 2012-13ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ರೂ. 750 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 31 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 07.01.2013**

1. ಸರ್ಕಾರವು 2012-13ನೇ ಸಾಲಿಗೆ ರೂ.750 (ಏಳು ನೂರು ಐವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ಲಕ್ಷ ರೂ.ಗಳಲ್ಲಿ)

| ಕ್ರಮಸಂಖ್ಯೆ | ವಿದ್ಯುತ್ ಸರಬರಾಜು ಕಂಪನಿಗಳು | ಮೊಬಲಗು |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 175.00 |
| 4 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 201.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 124.00 |
| | **ಒಟ್ಟು ಮೊತ್ತ** | **750.00** |

2. ಈ ಮೊತ್ತವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ದೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು ಮತ್ತು Utilization Certificate ನ್ನು ಕಳುಹಿಸತಕ್ಕದ್ದು.
3. ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 4801-80-190-0-02-422(ಯೋಜನೆ)ಯಡಿ ಭರಿಸತಕ್ಕದ್ದು.
4. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
5. ಇಂಧನ ಇಲಾಖೆಯ ಕಡತ ಸಂಖ್ಯೆ. ಇಎನ್ 31 ಪಿಎಸ್‌ಆರ್ 2012ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿಯನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ ಎ ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**PR.244**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಜಶೇಖರಯ್ಯ, ಮಾಜಿ ಎಪಿಸಿ-2748, ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಉಪ ಆರಕ್ಷಕ ಆಯುಕ್ತರು, ಸಿ.ಎ.ಆರ್., ಉತ್ತರ ಬೆಂಗಳೂರು–45, ಇವರ ಆದೇಶ ಸಂಖ್ಯೆ: ಡಿಇ–5/2007–08 (ಓ.ಬಿ. ಸಂಖ್ಯೆ: 40/09–10) ದಿನಾಂಕ: 30–7–09

2) ಮೇಲ್ಮನವಿ ಪ್ರಾಧಿಕಾರ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ, ಸಿ.ಎ.ಆರ್., ಬೆಂಗಳೂರು, ಇವರ ಹಿಂಬರಹ ಸಂಖ್ಯೆ: 14/ಅಪೀಲು(2)/ 2011 ದಿನಾಂಕ: 09–01–2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11–5–2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)15/2012–13 ದಿನಾಂಕ: 06–11–2012

**ಪ್ರಸ್ತಾವನೆ:**

ಶ್ರೀ ಎಸ್. ರಾಜಶೇಖರಯ್ಯ, ಮಾಜಿ ಎಪಿಸಿ–2748, ಸಿಎಆರ್, (ಉತ್ತರ) ಬೆಂಗಳೂರು. ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ಲೋಪ ಹಾಗೂ ದುರ್ವರ್ತನೆ, ದುರ್ನಡತೆ, ಅಶಿಸ್ತನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1. ಶ್ರೀ ಎಸ್. ರಾಜಶೇಖರಯ್ಯ, ಪೇದೆ–2748, "ಎ" ಕಂಪನಿ ಸಿ.ಎ.ಆರ್. ಉತ್ತರ ಬೆಂಗಳೂರು ಆದ ನೀವು ಶ್ರೀಮತಿ ಲೀಲಾವತಿ ಎಸ್. ಬಿನ್.ಲೇ ಕುಮಾರ್ ಎಸ್.ಡಿ. ಸಂತೆ ಮಾವತ್ತೂರು ಪೋಸ್ಟ್ ಕುಣಿಗಲ್(ತಾ) ತುಮಕೂರು ಜಿಲ್ಲೆ, ಎಂಬುವವರೊಂದಿಗೆ ದಿನಾಂಕ: 15–03–2001 ರಂದು ಬೆಂಗಳೂರಿನ ಮಾಗಡಿ ರಸ್ತೆಯಲ್ಲಿರುವ ಹೆಚ್.ವಿ.ಆರ್. ಕಲ್ಯಾಣ ಮಂಟಪದಲ್ಲಿ ವಿವಾಹವನ್ನು ಗುರುಹಿರಿಯರ ಸಮ್ಮುಖದಲ್ಲಿ ಮಾಡಿಕೊಂಡಿರುತ್ತೀರಿ. ಶ್ರೀಮತಿ ಲೀಲಾವತಿಯನ್ನು ಮದುವೆ–ಯಾಗುವಾಗ ನೀವು ಮತ್ತು ನಿಮ್ಮ ಕುಟುಂಬದವರು (ತಂದೆ ಸಿದ್ದಗಂಗಯ್ಯ, ತಾಯಿ ಶಿವಮ್ಮ, ಸಹೋದರ ಜಗದೀಶ) ರವರ ಬೇಡಿಕೆಯಂತೆ ರೂ. 02 ಲಕ್ಷ ನಗದು ಹಣ, 250 ಗ್ರಾಂ ಚಿನ್ನ, 01 ಕೆ.ಜಿ. ಬೆಳ್ಳಿ ಸುಮಾರು 30.000–00 ರೂಪಾಯಿ ಬೆಲೆ ಬಾಳುವ ಗೃಹೋಪಯೋಗಿ ಸಾಮಾಗ್ರಿ ದಿವಾನ, ಡೈನಿಂಗ್ ಟೇಬಲ್, ಮಂಚ ಇತ್ಯಾದಿ)ಗಳನ್ನು ವರದಕ್ಷಿಣೆ ರೂಪದಲ್ಲಿ ಪಡೆದುಕೊಂಡಿದ್ದಲ್ಲದೆ ಆಗಾಗ್ಗೆ ತವರು ಮನೆಯಿಂದ ಹಣ ತರುವಂತೆ ಕಳುಹಿಸುತ್ತಿರುತ್ತೀರಿ ಇತ್ತೀಚೆಗೆ ತಮ್ಮ ಪತ್ನಿಯವರಿಗೆ ಕಿರುಕುಳ ನೀಡಿ ತವರು ಮನೆಯಿಂದ 05 ಲಕ್ಷ ರೂಪಾಯಿಗಳನ್ನು ತರುವಂತೆ ಪೀಡಿಸಿ ಒತ್ತಾಯಿಸಿ ಕಳುಹಿಸಿರುತ್ತೀರಿ. ತಮ್ಮ ಪತ್ನಿಯ ತವರು ಮನೆಯವರು ಹಣವನ್ನು ನೀಡಲು ನಿರಾಕರಿಸಿದ್ದರಿಂದ ನೀವು ಮತ್ತು ನಿಮ್ಮ ಕುಟುಂಬದವರು ನೀಡುತ್ತಿದ್ದ ಕಿರುಕುಳವನ್ನು ತಾಳಲಾರದೆ ದಿನಾಂಕ: 26–9–2007ರಂದು ಸಂಜೆ 4–0 ಗಂಟೆ (16–00 ಗಂಟೆ)ಗೆ ತಾವು ತಮ್ಮ ಪತ್ನಿಯವರೊಂದಿಗೆ ವಾಸವಾಗಿದ್ದ ಸಿ.ಎ.ಆರ್. ಉತ್ತರ ಘಟಕದ ವಸತಿ ಸಂಕೀರ್ಣದಲ್ಲಿರುವ ಯಮುನ ಬ್ಲಾಕ್ ಮನೆ ನಂ.11ರಲ್ಲಿ ನೇಣು ಬಿಗಿದುಕೊಂಡು ಮೃತ ಪಟ್ಟಿರುತ್ತಾರೆ. ಈ ಸಂಬಂಧ ಮೃತಳ ತಾಯಿ ಶ್ರೀಮತಿ ವಿಮಲಮ್ಮರವರು ನೀಡಿದ ದೂರಿನ ಮೇರೆಗೆ ನಿಮ್ಮ ವಿರುದ್ದ ಹೆಣ್ಣೂರು ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 313/07ಕಲಂ 498(ಎ) 304(ಬಿ) ಐ.ಪಿ.ಸಿ. ರೆ/ವಿ 03 ಮತ್ತು 04 ಡಿ.ಪಿ. ಆಕ್ಟ್ ಪ್ರಕಾರ ಕೇಸು ದಾಖಲಿಸಿ ದಿನಾಂಕ: 27–09–2007 ರಂದು ಬೆಳಿಗ್ಗೆ 07–30 ಗಂಟೆಗೆ ದಸ್ತಗಿರಿಲಾಗಿರುತ್ತದೆ. ಇದು ನಿಮ್ಮ ದುರ್ನಡತೆ, ದುರ್ವತನೆ ತೋರಿಸುವುದಲ್ಲದೆ ನಿಮ್ಮ ಅಶಿಸ್ತನ್ನು ತೋರಪಡಿಸುತ್ತದೆ.
2. ಶ್ರೀ ಎಸ್. ರಾಜಶೇಖರಯ್ಯ ಪೇದೆ–2748 "ಎ" ಸಿ.ಎ.ಆರ್. ಉತ್ತರ ಬೆಂಗಳೂರು ಆದ ನೀವು ದಿನಾಂಕ: 27–08–2007 ರಿಂದ ಅನಧಿಕೃತವಾಗಿ ಗೈರುಹಾಜರಿಯಾಗಿ ಗೈರುಹಾಜರಿಯಲ್ಲಿ ಮುಂದುವರೆಯುತ್ತಿರುತ್ತೀರಿ. ತಾವು ನೀಡುತ್ತಿದ್ದ ಮಾನಸಿಕ, ದೈಹಿಕ ಹಾಗೂ ವರದಕ್ಷಿಣೆ ಕಿರುಕುಳ ತಾಳಲಾರದೆ ತಮ್ಮ ಪತ್ನಿ ಶ್ರೀಮತಿ ಲೀಲಾವತಿ ಬಿ.ಎಸ್. ರವರು ದಿನಾಂಕ: 26–09–2007ರಂದು ಸಂಜೆ 4.00ಗಂಟೆಗೆ ತಾವು ವಾಸವಾಗಿದ್ದ ಸಿ.ಎ.ಆರ್. ಉತ್ತರ ಘಟಕದ ವಸತಿ ಸಂಕೀರ್ಣದಲ್ಲಿರುವ ಯಮುನ ಬ್ಲಾಕ್ ಮನೆ ನಂ.11ರಲ್ಲಿ ನೇಣು ಬಿಗಿದುಕೊಂಡು ಮೃತ ಪಟ್ಟಿರುವ ಸಂಬಂಧ ನಿಮ್ಮ ವಿರುದ್ದ ಕರ್ತವ್ಯ ಲೋಪವನ್ನು ತೋರಿಸುವುದಲ್ಲದೆ ನಿಮ್ಮ ದುರ್ವರ್ತನೆ, ದುರ್ನಡತೆ ಅಶಿಸ್ತನ್ನು ಎತ್ತಿ ತೋರಿಸುತ್ತದೆ.
3. ಕರ್ನಾಟಕ ಪೊಲೀಸ್ ಮ್ಯಾನುಯಲ್ ಭಾಗ–1, ಅಧ್ಯಾಯ–7, ಆದೇಶ ಸಂಖ್ಯೆ: 319, ಕುಟುಂಬ ಮತ್ತು ಮಕ್ಕಳ ನಿರ್ಲಕ್ಷತೆಯಲ್ಲಿ ತಮ್ಮ ಪತ್ನಿಯನ್ನು ಸರಿಯಾಗಿ ನೋಡಿಕೊಳ್ಳುವತ್ತ ಅಲಕ್ಷಿಸಬಾರದು ಎಂದು ಸೂಚಿಸಿರುತ್ತದೆ. ಈ ಬಗ್ಗೆ ತಾವು ಮೂಲ ತರಬೇತಿಯನ್ನು ಪಡೆಯುವಾಗ ಅರಿತಿರುತ್ತಿರಿ ಆದಾಗ್ಯೂ ಕೂಡ ತಮ್ಮ ಪತ್ನಿಯನ್ನು ಸರಿಯಾಗಿ ನೋಡಿಕೊಳ್ಳದೆ ಅವರಿಗೆ ಮಾನಸಿಕ, ದೈಹಿಕ ಹಾಗೂ ವರದಕ್ಷಿಣೆ ಕಿರುಕುಳ ನೀಡಿ ಅವರು ದಿನಾಂಕ: 27–08–2007ರಂದು ತಾವು ವಾಸವಾಗಿದ್ದ ವಸತಿಗೃಹದಲ್ಲಿ ನೇಣು ಬಿಗಿದುಕೊಂಡು ಸಾಯಲು ಕಾರಣರಾಗಿರುತ್ತೀರಿ. ಇದು ನಿಮ್ಮ ದುರ್ನಡತೆ ನಿರ್ಲಕ್ಷತೆ, ಕುಟುಂಬ ನಿರ್ವಹಣೆಯಲ್ಲಿ ಆಲಕ್ಷತೆ, ಅಮಾನವೀಯತೆಯನ್ನು ತೋರಿಸುವುದಲ್ಲದೆ ನೀವು ಇಲಾಖೆಗೆ ಅಗೌರವ ತೋರಿಸುವುದನ್ನು ಸಹ ಎತ್ತಿ ತೋರಿಸುತ್ತದೆ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಆರಕ್ಷಕ ಆಯುಕ್ತರು, ಸಿಎಆರ್. ಉತ್ತರ ಬೆಂಗಳೂರು–45, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30–07–2009ರ ಆದೇಶದಲ್ಲಿ ಅರ್ಜಿದಾರರಿರನ್ನು ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ. ಹಾಗೂ ದಿನಾಂಕ: 27–08–2007 ರಿಂದ 04–10–2007 ರವರೆಗಿನ ಅವಧಿಯನ್ನು ವೇತನ ರಹಿತ ರಜೆಯನ್ನಾಗಿ ಪರಿಗಣಿಸಿ, ದಿನಾಂಕ: 05–10–2007 ರಿಂದ 30–07–2009 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸಮಾನಾಂತರಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ, ಸಿ.ಎ.ಆರ್., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–01–2012ರ ಹಿಂಬರಹದಲ್ಲಿ ಮೇಲ್ಮನವಿಯನ್ನು

ವಿಳಂಬವಾಗಿ ಹಾಗೂ ಯಾವುದೇ ಸಮರ್ಪಕ ವಿವರಣೆ ಇಲ್ಲದೆ ಸಲ್ಲಿಸಿದ ಕಾರಣ ಇದನ್ನು ಪರಿಶೀಲಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಕರ್ತವ್ಯಲೋಪ, ದುರ್ವರ್ತನೆ, ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 54 ಪೊಸಿಅ 2012 ಬೆಂಗಳೂರು, ದಿನಾಂಕ: 19–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ರಾಜಶೇಖರಯ್ಯ, ಮಾಜಿ ಎಪಿಸಿ–2748, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.351
S/C.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/ಪಿಆರ್/49/2010 (ಆ.ಪು. ಸಂಖ್ಯೆ:167/2010) ದಿನಾಂಕ: 04–6–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/39/ಉವ/2010 ದಿನಾಂಕ: 24–8–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19–9–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)61/2010–11 ದಿನಾಂಕ: 03–10–2012

**ಪ್ರಸ್ತಾವನೆ:**

ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಇವರು ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ಘೋರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಆಪಾದಿತ ಪೊಲೀಸ್ ಅಧಿಕಾರಿಯಾದ ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಆದ ನೀವು ಜಮಖಂಡಿ ಶಹರದಲ್ಲಿ ವೀಡಿಯೋ ಗೇಮ್ಸ್ ಗಳಂತಹ ಜೂಜಾಟ ಹತ್ತಿಕ್ಕುವಲ್ಲಿ ವಿಫಲರಾಗಿ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04–6–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24–8–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಮತ್ತು ಬೇಜವಾಬಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 152 ಪೊಸಿಅ 2010 ಬೆಂಗಳೂರು, ದಿನಾಂಕ: 19–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎನ್. ಶಿರಹಟ್ಟಿ, ಪಿ.ಎಸ್.ಐ., ಜಮಖಂಡಿ ಶಹರ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.352
S/C.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಬಿ. ಬಸವೇಶ್, ಪಿ.ಐ., ಜಿಲ್ಲಾ ಗುಪ್ತ ಶಾಖೆ, ಬೆಂಗಳೂರು ಜಿಲ್ಲೆ, ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ: ಸಿಬಿ(8)75(I)/2011–12 (ಓ.ಬಿ. ಸಂಖ್ಯೆ: 74/2012) ದಿನಾಂಕ: 20–6–2012
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11–7–2012
3) 'ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)75(I)/2011–12 ದಿನಾಂಕ: 09–10–2012

**ಪ್ರಸ್ತಾವನೆ:**

ಶ್ರೀ ಹೆಚ್.ಬಿ. ಬಸವೇಶ್, ಪಿ.ಐ., ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಗೈರುಹಾಜರಾಗಿ ವರ್ಗಾವಣೆಯಾದ ಸ್ಥಳದಲ್ಲಿ ಕೂಡಲೇ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಕರ್ತವ್ಯಲೋಪ–ವೆಸಗಿದ್ದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಹೆಚ್.ಬಿ. ಬಸವೇಶ್, ಪೊಲೀಸ್ ಇನ್ಸ್‌ಪೆಕ್ಟರ್ ಆದ ನಿಮಗೆ ಆಡಳಿತಾತ್ಮಕ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಈ ಕಛೇರಿಯ ಉಲ್ಲೇಖಿತ (1)ರ ವರ್ಗಾವಣೆ ಆದೇಶದಲ್ಲಿ ಗಿರಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ದಿಂದ ಸಿ.ಐ.ಡಿ., ಇಲ್ಲಿಗೆ ವರ್ಗಾಯಿಸಲಾಗಿದ್ದು, ಕಮೀಷನರ್ ಆಫ್ ಪೊಲಿಸ್, ಬೆಂಗಳೂರು ನಗರ, ರವರು ನಿಮ್ಮನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಿದ್ದು, ನಂತರದಲ್ಲಿ ಈ ಕಛೇರಿಯ ಉಲ್ಲೇಖಿತ (2)ರ ಆದೇಶದಲ್ಲಿ ಸಿ.ಐ.ಡಿ., ಬೆಂಗಳೂರು, ಇಲ್ಲಿಂದ ತಿಪಟೂರು ನಗರ ವೃತ್ತ, ತುಮಕೂರು ಜಿಲ್ಲೆ, ಇಲ್ಲಿಗೆ ವರ್ಗಾವಣೆ ಮಾಡಲಾಗಿತ್ತು. ಅನಂತರದಲ್ಲಿ ಉಲ್ಲೇಖಿತ (3)ರ ಆದೇಶದಲ್ಲಿ ತಿಪಟೂರು ವೃತ್ತ, ತುಮಕೂರು ಜಿಲ್ಲೆಯಿಂದ ಪಿ.ಟಿ.ಎಸ್., ಖಾನಾಪುರ ಇಲ್ಲಿಗೆ ವರ್ಗಾಯಿಸಲಾಗಿದ್ದು, ಜವಾಬ್ದಾರಿಯುತ ಅಧಿಕಾರಿಯಾದ ನೀವು ಪಿ.ಟಿ.ಎಸ್. ಖಾನಾಪುರ, ಇಲ್ಲಿಗೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಅತೀವ ದುರ್ನಡತೆ, ಉದ್ದಟತನ ಹಾಗೂ ಕರ್ತವ್ಯ ನಿರ್ಲಕ್ಷ್ಯತೆ ತೋರಿ ಕರ್ತವ್ಯ ಲೋಪ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 20–6–2012ರ ಆದೇಶದಲ್ಲಿ ಅರ್ಜಿದಾರರಿಗೆ ಛೀಮಾರಿ ಶಿಕ್ಷೆ ವಿಧಿಸಿ, ದಿನಾಂಕ: 15–02–2012 ರಿಂದ 10–4–2012 ರವರೆಗೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಮತ್ತು ದಿನಾಂಕ: 24–6–2011 ರಿಂದ 14–02–2012ರ ವರೆಗಿನ ಅನಧಿಕೃತ ಗೈರುಹಾಜರಿಯಾದ ಅವಧಿಯನ್ನು ಕೆ.ಸಿ.ಎಸ್. ನಿಯಮ 106(ಎ) ಪ್ರಕಾರ ವೇತನ ರಹಿತ ರಜೆಯೆಂದು ಆದೇಶಿಸಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ದುರ್ನಡತೆ, ಉದ್ದಟತನ ಹಾಗೂ ಕರ್ತವ್ಯ ನಿರ್ಲಕ್ಷ್ಯತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 79 ಪೊಸಿಅ 2012 ಬೆಂಗಳೂರು, ದಿನಾಂಕ: 19–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಬಿ. ಬಸವೇಶ್, ಪಿ.ಐ., ಜಿಲ್ಲಾ ಗುಪ್ತ ಶಾಖೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.353
S/C.30